# ಮಹಾತ್ಮ ಭರತ ಮತ್ತು ಶತ್ರುಘ್ನ

ಸೀ ತಾ ಸು ತ

ಸೀತಾಸುತ ಪ್ರಕಾಶನ : ಮಂಡ್ಯ

ಅಧಿಕೃತ ಮಾರಾಟಗಾರರು

ಸಾಧನ ಸಾಹಿತ್ಯ ಮಂದಿರ

ಲಕ್ಷ್ಮೀವಿಲಾಸ ರಸ್ತೆ, ಮೈಸೂರು-೫೭೦೦೦೧

RAMAYANADALLI PURUSHA PATRAGALU-PART 3
MAHATHMA BHARATHA & SHATHRUGNA by
"Seetha Sutha" (Kachigere Siddegowda) Retired Tahsildar,
1596, Vidyanagar, Mandya; Published by Seetha Sutha
Prakashana, Mandya, Pages IV+108, First edition 1984.
Price Rs. 7-00





ಬೆಲೆ: 7–00ರೂ.



ಮುದ್ರಣ:
ರಶ್ಮಿ ಉದ್ಯಮ ಕೇಂದ್ರ,
56, ಮೊದಲನೆಯ ಮುಖ್ಯ ರಸ್ತೆ,
ಜಯಲಕ್ಷ್ಮೀಪುರಂ, ಮೈಸೂರು–12

# ಅ ರಿ ಕೆ

"ಶ್ರೀ ವಾಲ್ಮೀಕಿ ರಾಮಾಯಣಲ್ಲಿ ಸ್ತ್ರೀಪಾತ್ರಗಳು" ಎಂಬ ಗ್ರಂಥವನ್ನು ಬಿಡಿಬಿಡಿಯಾಗಿಯೂ, ಸಮಗ್ರವಾಗಿಯೂ ಓದುಗರಿಗೆ ಅನುಕೂಲವಾಗುವಂತೆ ಪ್ರಕಟಿಸಿದ್ದಾಯಿತು. ರಾಮಾಯಣ ಪ್ರಿಯರು ಅದಕ್ಕೆ ಪ್ರೋತ್ಸಾಹಕರವಾದ ಸ್ವಾಗತವನ್ನು ನೀಡಿದ್ದಾರೆ. ಆ ಬಗೆಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಈ ಮೂಲಕ ಅರ್ಪಿಸುತ್ತೇನೆ. ರಾಮಾಯಣವು ಸಾಮಾನ್ಯವಲ್ಲವೆಂಬ ಲೋಕವಾಣಿಯಿದೆ. ರಾಮಾಯಣವನ್ನು ತಿಳಿದವರು ಇಬ್ಬರೇ ಇಬ್ಬರೆಂದು ಹರಿಕಥೆ ದಾಸರ ವಾಣಿಯಿದೆ—ವಾಲ್ಮೀಕಿ, ಹನುಮಂತರೆಂದು. ಆದ್ದರಿಂದ ಓದುಗರು ಹಂಸ ಕ್ಷೀರ ನ್ಯಾಯವನ್ನು ಅನುಸರಿಸಿ ಪಠಿಸಬೇಕಾದ ಆವಶ್ಯಕತೆ ಇದೆ. ಶ್ರೀ ರಾಮನ ಅನುಗ್ರಹದಿಂದ "ರಾಮಾಯಣದಲ್ಲಿ ಪುರುಷ ಪಾತ್ರಗಳು" ಎಂಬ ಈ ಕೃತಿಯನ್ನು ಪ್ರಕಟಿಸುತ್ತಿದ್ದೇನೆ. ಇದನ್ನೂ ಬಿಡಿ ಬಿಡಿಯಾಗಿಯೂ ಸಮಗ್ರವಾಗಿಯೂ ಪ್ರಕಟಿಸುವ ವ್ಯವಸ್ಥೆಯನ್ನು ಮಾಡಿದೆ. ಅದು ಹೀಗಿದೆ: ೧. ಹನುಮಂತ, ಶರಣ ಶ್ರೀರಾಮ ೨. ಇಂದ್ರ, ದಶರಥ, ಸುಮಂತ್ರ, ಜನಕ, ಪರಶುರಾಮ, ಕುಶಧ್ವಜ, ಗುಹ ೩. ಮಹಾತ್ಮ ಭರತ ಶತ್ರುಘ್ನ, ೪. ಲಕ್ಷ್ಮಣ, ಜಟಾಯು, ಸಂಪಾತಿ, ವಿರಾಧ, ಕಬಂಧ ೫. ರಾಮಾಯಣದ ಋಷಿಗಳು ೬. ಹುತಾತ್ಮ ವಾಲಿ, ಸುಗ್ರೀವ, ಜಾಂಬವಂತ, ಅಂಗದ, ಸುಷೇಣ, ನಳ, ನೀಲ, ತಾರ, ೭. ವಿಭೀಷಣ, ಕುಂಭಕರ್ಣ, ಇಂದ್ರಜಿತು, ಮಕರಾಕ್ಷ, ಖರದೂಷಣ, ತ್ರಿಶಿರ, ಮಾರೀಚ, ಅಕಂಪನ, ಸುಪಾರ್ಶ್ವ, ಪ್ರಮುಖ ರಾಕ್ಷಸ ಯೋಧರು ೮. ರಾವಣ, ಶ್ರೀರಾಮ. ಆ ಮೇಲೆ ಸಮಗ್ರ ಗ್ರಂಥ ಪ್ರಸ್ತಾವನೆ, ಮುನ್ನುಡಿ ಮತ್ತು ಸಮರ್ಪಣೆಯೊಡನೆ.

ಈಗಾಗಲೇ ಮೊದಲನೇ ಭಾಗ ಹನುಮಂತ, ಶರಣ ಶ್ರೀರಾಮ ಮತ್ತು ಎರಡನೆಯ ಭಾಗ ಇಂದ್ರ, ದಶರಥ, ಸುಮಂತ್ರ, ಜನಕ, ಪರಶುರಾಮ ಕುಶಧ್ವಜ, ಗುಹ ಇವರ ಪಾತ್ರಗಳನ್ನು ಕುರಿತ ವಿವೇಚನೆ ಪ್ರಕಟವಾಗಿವೆ. ಈಗ

ಮಹಾತ್ಮ ಭರತ ಮತ್ತು ಶತ್ರುಘ್ನರನ್ನು ಕುರಿತ ಪಾತ್ರಗಳ ಪರಿಶೀಲನೆ ಪ್ರಕಟವಾಗುತ್ತಿದೆ.

ನನ್ನ ಎಲ್ಲಾ ಕೃತಿಗಳ ಹಸ್ತಪ್ರತಿಗಳನ್ನು ಆಮೂಲಾಗ್ರವಾಗಿ ಓದಿ ತಿದ್ದುವ ಶ್ರಮವನ್ನು ಮಾನ್ಯ ಮಿತ್ರರಾದ ಡಾ. ಎಂ. ರಾಮಕೃಷ್ಣ ರವರು (ವಿಶ್ವವಿದ್ಯಾನಿಲಯ ಸಂಜೆ ಕಾಲೇಜಿನ ಕನ್ನಡ ಉಪನ್ಯಾಸಕರು) ವಹಿಸಿಕೊಂಡಿದ್ದಾರೆ. ಇಂಥ ಪರೋಪಕಾರ ಕಾರ್ಯಗಳಿಗೆ ಸಲ್ಲಬೇಕಾದ ಕೃತಜ್ಞತೆಗಳನ್ನು ತಿರಸ್ಕರಿಸುವ ವಿಶಾಲಹೃದಯಿಗಳವರು. ಮುದ್ರಿತ ಪ್ರತಿಗಳನ್ನು ತಿದ್ದುವ ಕಾರ್ಯವನ್ನು ಶ್ರೀ ಕ್ಯಾತನಹಳ್ಳಿ ರಾಮಣ್ಣನವರು ಮಾಡಿದ್ದಕ್ಕೂ, ಮುದ್ರಿತವಾದ ಅಂತಿಮ ಪ್ರತಿಯನ್ನು ಮತ್ತೊಂದಾವರ್ತಿ ನೋಡುವ ಶ್ರಮವನ್ನು ಶ್ರೀ ಕೆ.ಸಿ. ಪಂಚಲಿಂಗೇಗೌಡರು ನಿರ್ವಹಿಸಿದ್ದಕ್ಕೂ, ಕೃತಿಯನ್ನು ಮುದ್ರಿಸಿದ ರಶ್ಮಿ ಉದ್ಯಮ ಕೇಂದ್ರ, ಜಯಲಕ್ಷ್ಮಿಪುರಂ, ಮೈಸೂರು ಅವರಿಗೂ, ಈ ಕಾರ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿರುವ ಶ್ರೀ ಕೆ. ಟಿ. ವೀರಪ್ಪ ಮತ್ತು ಶ್ರೀ ಬಿ. ಕೃಷ್ಣ ರವರಿಗೂ ನಾನು ಚಿರಋಣಿಯಾಗಿದ್ದೇನೆ.

ಮಂಡ್ಯ
೩೧-೫-೧೯೮೮

ಸೀತಾಸುತ

# ಮಹಾತ್ಮ ಭರತ

ಉಲ್ಲೇಖನಗಳು

೧) ಅಣ್ಣನು ದೊರೆಯಾಗತಕ್ಕದ್ದು ನ್ಯಾಯಸಮ್ಮತ ಎಂದು ಭರತನಿಗೆ ತಿಳಿದಿತ್ತು. ಆದರೆ ಇವನು ಇದನ್ನು ತಿಳಿದಿರುವನೆಂದು ದಶರಥನು ಕಾಣಲಿಲ್ಲ. ಈ ಮಗನಲ್ಲಿ ನಂಬಿಕೆಯಿದ್ದು ಅವನಿರುವ ವೇಳೆ ದಶರಥನು ರಾಮನ ಅಭಿಷೇಕದ ಏರ್ಪಾಡನ್ನು ಮಾಡಿದ್ದರೆ ರಾಮಾಯಣದ ಕಥೆ ವನವಾಸದವರೆಗೆ ಬೆಳೆಯುತ್ತಿರಲಿಲ್ಲ. ರಾಮನು ಅರಣ್ಯದಲ್ಲಿರುವುದು ಹೇಗೋ ಹಾಗೆ ಭರತನು ರಾಜ್ಯದಲ್ಲಿರುವುದೂ ಪಿತೃವಾಕ್ಯದ ಭಾಗ. ಭರತನ ಪ್ರೇಮವಾಗಲಿ ಭರತನ ಸೇವೆಯಾಗಲಿ ಲಕ್ಷ್ಮಣನ ಪ್ರೇಮ ಸೇವೆಗಳಿಗೆ ಕಡಿಮೆಯಲ್ಲ. (ಆದಿಕವಿ ವಾಲ್ಮೀಕಿ. ಮಾಸ್ತಿ. ಪು. ೧೨೮–೧೩೦).

೨) ಲಕ್ಷ್ಮಣನ ಸೇವೆ ಭಕ್ತಿ ಸಮರ್ಪಣದ್ದಾದರೆ ಸಮಸ್ತವನ್ನೂ ತ್ಯಾಗ ಮಾಡಿದ್ದು ಇನ್ನೊಂದು ಬಗೆಯಲ್ಲಿ ಭರತನ ಗುಣ...ಕೌಸಲ್ಯೆ ಭರತನನ್ನು ನೋಡಿದಾಗ ಸುಮಿತ್ರೆಯೊಡನೆ ಅಗ್ನಿಹೋತ್ರದ ಸಮೇತ ರಾಮನಲ್ಲಿಗೆ ಹೋಗುವೆನೆಂದ ಶೋಕದ ನುಡಿಗಳು ವಂಶದ ಮುಖ್ಯ ಎಳೆಯನ್ನು ನಡೆಸುವವನಲ್ಲಿಯೇ ಇರಬೇಕಾದ್ದು ಅಗ್ನಿಹೋತ್ರದ ಸಂಕೇತ. ಭರತನ ವ್ಯಥೆಗೆ ಹೋಲುವಂಥದ್ದು ಬೇರೆ ಇನ್ನೇನೂ ಇರಲಿಲ್ಲ...ಭರತನ ತ್ಯಾಗವು ತನ್ನ ಅಣ್ಣನಲ್ಲಿ ತನಗಿರುವ ಭಕ್ತಿ ವಿಶ್ವಾಸಗಳನ್ನು ತೋರಿಸುವುದೆಂದಲ್ಲ, ತಾನೂ ತನ್ನ ಮನೆತನದವರೂ ಧರ್ಮವನ್ನು ಅರ್ಥ ಮಾಡಿಕೊಂಡ ಹಾಗೆ ನಡೆಯುವ ರೀತಿ ತನಗೆ ರಾಜ್ಯಾಭಿಲಾಷೆ ಇಲ್ಲವೆಂಬುದನ್ನೂ ತ್ರಿಕರಣವಾಗಿಯೂ ವ್ಯಕ್ತಪಡಿಸುವುದೇ ಆಗಿತ್ತು... ಪ್ರತಿಯೊಂದು ಸಂದರ್ಭದಲ್ಲೂ ರಾಮನು ಸಾಕ್ಷಾತ್ ಎಲ್ಲೆಲ್ಲಿಯೂ ಇದ್ದನೆಂಬಂತೆ ಭರತನಿಗೆ ಭಾವನೆ ... ರಾಜಧರ್ಮದ ಒಂದು ಆದರ್ಶಕ್ಕೂ ಸಹೋದರ ಭಕ್ತಿಗೂ ಹದಿನಾಲ್ಕು ವರ್ಷಗಳ

ಕಾಲ ತನ್ನನ್ನು ಮೀಸಲು ಮಾಡಿಕೊಂಡಿದ್ದ (ವಿ. ಸೀ. ರಾಮಾಯಣ. ಪುಟಗಳು. ೮೧, ೮೫, ೮೬, ೮೭, ೮೮).

೩) "To understand Bharata's feelings, we should keep in mind his innate noble nature, his love for Rama, his grief for his father and the sense of guilt and shame that for his sake his mother had done this grievous wrong. We should not weigh his words in dry air and a chemical balance. In such contexts, poetry flashes fire ......... "Among the characters in the Ramayana, Bharata is the perfect embodiment of virtue.... There have been through the ages great and noble souls whose virtue shines eternally in the midst of the sordid self seeking of a sinful world, as beacon light to seekers of the right path, and as a token of the god in man" (C. R's Ramayana. P. 94-95).

" In Kamban Ramayana it is said " Kausalya said (when she met Bharata) amidst her sobs : " Many were your ancestors who attained fame. You have surpassed them all in glory by renouncing the Kingship that has come to you are indeed King among Kings" (C. R's. Ramayana P. 96).

"All Valmeeki's characters are human beings with heightened human qualities. It is only under great stress or in exceptional circumstances that divinity shines faintly through the human nature" (C. R's. Ramayana P. 103).

೪) " One might almost say that he (Bharata) had an individuality, a strong individuality and expressed

it so that you felt great respect for Bharata" (P. 192) "But for him (Bharata) to launch out a crusade (against his mother) is scandalous" (V. S. Sastry's Lectures on Ramayana P. 204).

೫) "ಬಹುಕಾಲ ಯತ್ನಿಸಿ ನಾನು ಗಳಿಸಿರಬಹುದಾದ ಕೀರ್ತಿಯನ್ನು ಭರತನು ಅಲ್ಪಕಾಲದಲ್ಲಿಯೇ ಈಗ ಸಂಪಾದಿಸಿಬಿಟ್ಟನು" (ರಾಮನ ಪಾದುಕೆಗಳನ್ನು ಭರತ ಬೇಡಿದಾಗ ಶ್ರೀರಾಮ ಹೇಳಿದ ಮಾತು). (ಭಾಸನ ಪ್ರತಿಮಾ ನಾಟಕ. "ಶ್ರೀರಾಮಚಂದ್ರ" ಪು. ೧೬. ಎನ್. ರಂಗನಾಥಶರ್ಮ).

೬) "ಇಮಾಂ ಹಿ ದುಃಖಪ್ರಗತಿಂ ನಿಶಮ್ಯತಾಂ
ಅನೇಕ ರೂಪಾಮವಿತರ್ಕಿತಾಂ ಪುರಾ ।
ಭಯಂ ಮಹತ್ತದ್ಧೃದಯಾನ್ನಯಾತಿಮೇ
ವಿಚಿಂತ್ಯ ರಾಜಾನಮಚಿಂತ್ಯ ದರ್ಶನಮ್" ॥

"ಈ ಪ್ರಕಾರ ದುಃಸ್ವಪ್ನವು ನಾನಾ ರೂಪದಲ್ಲಿ ಕಾಣಿಸಿತು. ನನಗೆ ಹಿಂದೆ ಯಾವಾಗಲೂ ಇಂಥ ದುಃಸ್ವಪ್ನವು ಬಿದ್ದುದೇ ಇಲ್ಲ. ಮಹತ್ತರವಾದ ಭಯವು ನನ್ನ ಮನಸ್ಸಿನಲ್ಲಿ ನಾಟಿದೆ. ಈಗಲೇ ಮಹಾರಾಜನನ್ನು ನೋಡಿಬಿಡೋಣವೆಂದರೂ ಸಾಧ್ಯವಿಲ್ಲ. ಆದ್ದರಿಂದ (ಸ್ವಪ್ನದಲ್ಲಿ ಕಂಡ ಆತನ ಸ್ಥಿತಿಯನ್ನು ನೆನೆಸಿಕೊಂಡರೆ) ನನ್ನ ಭಯ ಹೋಗುವುದೇ ಇಲ್ಲ" ಎಂದು ಹೇಳಿದನು. (ರಾ. ಸ. ೬೯. ಶ್ಲೋ, ೨೧).

೭) "ಅಪ್ಪಾ, ಸುಗ್ರೀವ, ಸೋದರರೆಲ್ಲರೂ ನಮ್ಮ ಭರತನಂತೆ ಇರುವುದಿಲ್ಲ" ರಾಮವಚನ (ಯು. ಸ. ೧೮. ಶ್ಲೋ. ೧೫).

೮) "ಶ್ರೀರಾಮ ಭರತರ ಸಂವಾದದಲ್ಲಿ ಗೆದ್ದವನು ಶ್ರೀರಾಮ, ಸೋತವನು ಭರತ" (ರಾಮಾಯಣ ಅಯೋ. ಸಂ. ೨. ಶ್ರೀರಂಗನಾಥಶರ್ಮ. ಪು, ೪೯೧).

೯) "ಭರತನು ತಾಯಿ ಮಾಡಿದ ಪಾಪಕ್ಕೆ ನಂದಿಗ್ರಾಮ ವಾಸವೇ ಪ್ರಾಯಶ್ಚಿತ್ತವೆಂದು ನಿರ್ಣಯಿಸಿದ" ("ಶ್ರೀರಾಮಚಂದ್ರ" ಎಸ್. ಆರ್. ಶರ್ಮಾ. ಪು. ೨೬).

೧೦) "ವಾಲ್ಮೀಕಿ ಪ್ರಪಂಚದಲ್ಲಿಯ ಮತ್ತೊಬ್ಬ ಆದರ್ಶ ವ್ಯಕ್ತಿಯೆಂದರೆ, ಭರತ. ಭರತನ ತ್ಯಾಗ ದೊಡ್ಡದೋ ರಾಮನ ತ್ಯಾಗ ದೊಡ್ಡದೋ ನಿರ್ಧಾರ ಮಾಡುವುದು ಸುಲಭವಲ್ಲ. ವಾಲ್ಮೀಕಿ ಚಿತ್ರಿಸಿರುವ ಜಗತ್ತಿನಲ್ಲಿಯ ರಾಮ, ಸೀತೆ, ಲಕ್ಷ್ಮಣ, ಭರತ, ಆಂಜನೇಯ—ಈ ಐವರೂ ತ್ಯಾಗವೀರರು. ರಾಜ್ಯದ ವೈಭವವನ್ನು ತೊರೆದು ರಾಜ್ಯದ ಭಾರವನ್ನು ಮಾತ್ರ ಹೊತ್ತವನು ಭರತ. ಅವನು ತಪಸ್ವಿ. ಆದರೆ ಕರ್ತವ್ಯನಿಷ್ಠನಾದ ತಪಸ್ವಿ, ಲೋಕವನ್ನೂ ಲೋಕವಿರಕ್ತಿಯನ್ನೂ ಸಮನ್ವಯಪಡಿಸಿಕೊಂಡಿದ್ದ ಮಹಾನುಭಾವ ಭರತ" (ಡಿ. ವಿ. ಜಿ. ಮುನ್ನುಡಿ).

೧೧) "ತನ್ನ ಹೆಸರಿನಲ್ಲಿ ನಡೆದ ಅನ್ಯಾಯಗಳಿಗೆ ತನ್ನ ಒಪ್ಪಿಗೆ ಇಲ್ಲವೆನ್ನುವುದು ಸಿದ್ಧವಾಗಬೇಕಾದರೆ ತಾನು [illegible]ಜ್ಯತ್ಯಾಗ ಮಾಡುವುದೊಂದೇ ಅವನಿಗೆ ಕಾಣುವ ಉಪಾಯ".

"ಸ್ವಾರ್ಥತ್ಯಾಗದಲ್ಲಿ ರಾಮ ಭರತರಿಬ್ಬರೂ ಸ್ಪರ್ಧೆ ಹೂಡಿದ್ದಾರೆ"

"ಮಾತನಾಡುವುದರಲ್ಲಿಯೂ ಭರತನು ರಾಮನಿಗೆ ಕಡಿಮೆಯಿಲ್ಲ. ಆದರೆ ಅಣ್ಣನೆಂಬ ಗೌರವದಿಂದ ಕಡೆಗೆ ತಾನೇ ಸೋಲುತ್ತಾನೆ. ಸೋತರೂ ಗೆಲ್ಲುತ್ತಾನೆನ್ನಬಹುದು"

"ಭರತನು ರಾಮನಷ್ಟು ಪ್ರಶಾಂತನಲ್ಲ, ಮುಂಗೋಪಿ, ಭಾವನಾ ಪ್ರಧಾನ ವೃತ್ತಿಯವನು. ಅಣ್ಣನ ಪ್ರೀತಿಯ ಭರದಲ್ಲಿ ತಾಯಿಗೆ ಸಲ್ಲಬೇಕಾದ ವಿನಯವನ್ನು ಈಡಾಡಿ ಬಿಡುತ್ತಾನೆ...ರಾಮನಿಗಿಂತ ಸ್ವಲ್ಪ ಹೆಚ್ಚಿನ ತ್ಯಾಗವನ್ನು ಭರತ ಮಾಡಿರಬಹುದಾದರೂ, ಲೋಕಾನುಭವದಲ್ಲಿ ರಾಮನಿಗಿಂತ ಕಡಿಮೆ. ಇನ್ನೂ ಅಪಕ್ವ ಬುದ್ಧಿ

ಘುವನೆಂಬುದನ್ನು ವಾಲ್ಮೀಕಿಗಳು ತೋರಿಸಲು ಮರೆತಿಲ್ಲ. ಭರತನು ಭಾವಾವೇಶದಲ್ಲಿ 'ನಾನೇ ಹದಿನಾಲ್ಕುವರ್ಷ ಕಾಡಿನಲ್ಲಿದ್ದು ಪಿತ ನಾಣತಿಯನ್ನು ನಡೆಸಿದಂತಾಗುತ್ತದೆ' ಎಂದು ಹೇಳುವಾಗಲೂ ವ್ಯವಹಾರ ಜ್ಞಾನದ ಅಭಾವವೇ ವ್ಯಕ್ತವಾಗುತ್ತದೆ. ಗುಣಾತಿರೇಕವೂ ದೋಷವಾಗಬಹುದೆಂಬುದು ಇವನ ಪಾತ್ರದಲ್ಲಿ ಉದ್ದಕ್ಕೂ ಕಾಣುತ್ತದೆ' ('ಸಂಸ್ಕೃತಕಾವ್ಯ'. ಡಾ. ಕೆ. ಕೃಷ್ಣಮೂರ್ತಿ. ಪು. ೭೬),

## ಭರತನ ಬಾಲ್ಯ

ಪುತ್ರಕಾಮೇಷ್ಟಿಯ ಪ್ರಸಾದದ ಫಲವಾಗಿ ಕೌಸಲ್ಯೆ, ಸುಮಿತ್ರೆ ಮತ್ತು ಕೈಕೇಯಿಯರಲ್ಲಿ ಸಂತಾನ ಪ್ರಾಪ್ತಿಯಾಯಿತು. ದಶರಥನ ಕಿರಿಯ ರಾಣಿ ಕೈಕೇಯಿಯಲ್ಲಿ ಭರತನು ಜನ್ಮತಾಳಿದ. ಆದರೆ ಅವನ ಶೈಶವ ಲೀಲೆಗಳ ವಿಚಾರ ಕಾವ್ಯದಲ್ಲಿ ನಿರೂಪಿತವಾಗಿಲ್ಲ. ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ಮುಪ್ಪಿನ ತಂದೆಯ ಪ್ರೀತಿಗೆ ಪಾತ್ರರಾಗಿದ್ದಲ್ಲಿ ಸಂಶಯವಿಲ್ಲ. ಬಾಲ್ಯದಿಂದಲೂ ಶ್ರೀರಾಮ ಲಕ್ಷ್ಮಣರು ಸದಾ ಜತೆಯಲ್ಲೇ ಇರುತ್ತಿದ್ದರು. ಅಂತೆಯೆ ಭರತ ಶತ್ರುಘ್ನರು ಎಲ್ಲಾ ಬಾಲಕರಂತೆಯೇ ಇವರೂ ಕೂಡ. ಆದರೆ ರಾಜವಂಶೀಕರಾದ ಇವರಿಗೆ ಕ್ಷತ್ರಿಯ ಯೋಗ್ಯವಾದ ವಿದ್ಯಾಭ್ಯಾಸ ಮತ್ತು ಕ್ರೀಡೆಗಳಿಗೆ ಸೂಕ್ತವಾದ ಏರ್ಪಾಡನ್ನು ಮಾಡಲಾಗಿತ್ತು. ಶ್ರೀರಾಮನು ಮಾತ್ರ ಅರಮನೆಯ ಒಳಗೂ ಹೊರಗೂ ಅತ್ಯಂತ ಪ್ರೀತಿ ಪಾತ್ರನಾಗಿದ್ದನು. ಹಿರಿಯ ಅಣ್ಣನಾದದ್ದರಿಂದ ಮೂವರು ತಮ್ಮಂದಿರೂ ವಿನಯದಿಂದಲೂ ಸಹೋದರ ಪ್ರೇಮದಿಂದಲೂ ವರ್ತಿಸುತ್ತಿದ್ದರು. ಬಹು ಮುಖ್ಯವಾದ ವಿಷಯವೆಂದರೆ ಯಾವ ಸಂದರ್ಭದಲ್ಲೂ ತಾವುಗಳು ದಾಯಾದಿಗಳೆಂದು ನಡೆದುಕೊಳ್ಳಲಿಲ್ಲ. ಭರತ ತನ್ನ ತಂದೆಯ ಶವಸಂಸ್ಕಾರದ ಸಮಯದಲ್ಲಿ ತಂದೆ ತನ್ನನ್ನು ಹೇಗೆ ಪ್ರೀತಿಸುತ್ತಿದ್ದ, ಏನು ಬೋಧನೆ ಮಾಡುತ್ತಿದ್ದನೆಂಬುದನ್ನು ಸ್ಮರಿಸಿಕೊಳ್ಳುತ್ತಾನೆ. "ಅಪ್ಪ, ಅಣ್ಣನಿಗೆ ವಿಧೇಯನಾಗಿ ನಡೆದುಕೊಳ್ಳಬೇಕೆಂದು ನನಗೆ ನೀನು ಬೋಧಿಸಿದ್ದೆಯಲ್ಲವೆ"? (ಅಯೋ. ಸ. ೭೭. ಶ್ಲೋ. ೪-೬). ಆ ಸಮಯದಲ್ಲಿ ಶತ್ರುಘ್ನನೂ ಹೀಗೆ ಹೇಳುತ್ತಾನೆ. "ಅಪ್ಪ, ಸುಕುಮಾರನೂ ಬಾಲಕನೂ ಆದ ಭರತನು ಗೋಳಾಡುತ್ತಿರುವನಲ್ಲ?

ಯಾವಾಗಲೂ ಅವನನ್ನು ಲಾಲಿಸುತ್ತಿದ್ದೆಯಲ್ಲ? ಉತ್ತಮವಾದ ಭೋಜ್ಯ ಪಾನ ವಸ್ತ್ರಾಭರಣಾದಿಗಳನ್ನು ತರಿಸಿ, ಬೇಕುಬೇಕಾದುದನ್ನು ತೆಗೆದುಕೊಳ್ಳಿ ಎಂದು ನಮ್ಮನ್ನು ಒತ್ತಾಯಪಡಿಸುತ್ತಿದ್ದೆಯಲ್ಲ?" (ಅಯೋ. ಸ. ೭೭. ಶ್ಲೋ. ೧೫). ಸಾಮಾನ್ಯವಾಗಿ ಮಾತಾಪಿತೃಗಳ ಗುಣಾವಗುಣಗಳನ್ನು ಮಕ್ಕಳು ಪಡೆಯುತ್ತಾರೆಂಬ ಪಡೆನುಡಿಯಿದೆ. ಅದರಂತೆ ಭರತನು ತಾಯಿಯ ಗುಣಗಳನ್ನು ಪಡೆದಿದ್ದನೆಂಬುದು ಶಂಕಾಸ್ಪದ. ಮುಂದೆ ದಶರಥನ ಮರಣ ವಾರ್ತೆಯನ್ನು ಅರಮನೆಯಾಳುಗಳು ರಾಜಗೃಹಕ್ಕೆ ಹೋಗಿ ತಿಳಿಸಿದಾಗ ಅವರೆದುರಿಗೇ ತಾಯಿಯನ್ನು ನಿಂದಿಸುತ್ತಾನೆ. ಮುಂದೆ ಭರದ್ವಾಜರಿಗೆ ಕೈಕೇಯಿಯನ್ನು ಪರಿಚಯ ಮಾಡಿಕೊಡುವಾಗ "ಇವಳು ಸಿಡುಕಿ, ಅವಿವೇಕಿ, ದುರಹಂಕಾರಿ, ಸುಂದರಿಯೆಂಬ ಗರ್ವ, ಐಶ್ವರ್ಯದ ಮೇಲೆ ಆಶೆ, ದುಷ್ಟ ಳಾದಳೂ ಒಳ್ಳೆಯವಳಂತೆ ನಟಿಸುತ್ತಾಳೆ. ಕಠೋರ ಹೃದಯಳು, ಪಾಪಿ" ಎಂದು ಹೇಳುತ್ತಾನೆ. ಹೀಗೆ ಮಾತಾಪಿತೃಗಳನ್ನು ಸರಿಯಾಗಿ ಅರಿತುಕೊಳ್ಳದೆ ನಿಂದಿಸುವುದಕ್ಕೆ ಕಾರಣ ಅವನು ಬಹಳಕಾಲ ಮಾತಾಪಿತೃಗಳಿಂದ ದೂರವಾಗಿದ್ದುದು. ಅಷ್ಟೇಕೆ, ದಶರಥ ಕೈಕೇಯಿಯರೂ ಭರತನನ್ನು ಸ್ಪಷ್ಟವಾಗಿ ತಿಳಿದುಕೊಂಡಿರಲಿಲ್ಲ. ಬಾಲ್ಯದಿಂದಲೂ ಭರತನು ತನ್ನ ವ್ಯಕ್ತಿತ್ವವನ್ನು ತಾನೇ ಸೃಷ್ಟಿಸಿಕೊಂಡಿದ್ದಾನೆ. ಯಾವಾಗಲೂ ಯಾರಿಂದಲೂ ನಿರ್ಬಂಧಕ್ಕೆ ಸಿಕ್ಕಿಕೊಂಡವನಲ್ಲ.

### ವಿಶ್ವಾಮಿತ್ರರ ದರ್ಶನ, ರಾವಣನಾಮೋಚ್ಚಾರಣೆ

ಬಾಲ್ಯಾವಸ್ಥೆಯಲ್ಲೂ ಎಷ್ಟುಕಾಲ ರಾಜಗೃಹದಲ್ಲಿ ಕಾಲಕಳೆದನೊ ಹೇಳಲಾಗುವುದಿಲ್ಲ. ಆದರೆ ವಿಶ್ವಾಮಿತ್ರರು ಅಯೋಧ್ಯಾ ಅರಮನೆಗೆ ಆಗಮಿಸಿದಾಗ ಭರತ ಶತ್ರುಘ್ನರೂ ಇದ್ದರು. ರಾವಣನ ಕಡೆಯವರು ತನ್ನ ಯಜ್ಞಕ್ಕೆ ಭಂಗವನ್ನುಂಟುಮಾಡುತ್ತಿದ್ದಾರೆ, ಸುಬಾಹು ಮಾರೀಚರನ್ನು ನಿಗ್ರಹಿಸಲು ಶ್ರೀರಾಮನೇ ಸಮರ್ಥ; ಆದ್ದರಿಂದ ಅವನನ್ನು ಹತ್ತು ದಿನಗಳು ಮಾತ್ರ ಕಳಿಸಿಕೊಡು. ಯಾಗ ರಕ್ಷಣೆ ಮಾಡಿ ಹಿಂದಿರುಗುತ್ತಾನೆ. ಈಗ ನನ್ನ ಸಂಗಡ ಕಳಿಸು ಎನ್ನುತ್ತಾನೆ. ಆ ರಾವಣನ ಕಡೆಯವರನ್ನು ಕೇವಲ ಹದಿನೈದು ಹದಿನಾರು ವರ್ಷದ ಈ ನನ್ನ ಈ ಮುದ್ದು ಕುಮಾರ

ನಿಗ್ರಹಿಸುತ್ತಾನೆ ಎಂಬುದು ಹುಡುಗಾಟಿಕೆಯ ಮಾತು, ನಾನೇ ಸೇನಾಸಮೇತ ಬರುತ್ತೇನೆ. ತ್ರಿಲೋಕಗಳಲ್ಲಿಯೂ ದಶಕಂಠನನ್ನು ಎದುರಿಸುವವರೇ ಇಲ್ಲ. ಶ್ರೀರಾಮನಿಗೆ ಮದುವೆ ಮಾಡಬೇಕೆಂಬ ಯೋಜನೆಯನ್ನೂ ಇಟ್ಟುಕೊಂಡಿದ್ದೇನೆ ಎಂದು ದಶರಥನು ಹೇಳಿದ. ಚಂಡಕೌಶಿಕ ರುದ್ರನಾದ. ವಸಿಷ್ಠರು "ರಾಮನ ಶ್ರೇಯಸ್ಸಿಗೋಸುಗವೇ ಕರೆದುಕೊಂಡು ಹೋಗಲು ಬಂದಿದ್ದಾರೆ, ಕಳಿಸು" ಎಂದರು. ಆ ಸಮಯದಲ್ಲಿ ಭರತ ಶತ್ರುಘ್ನರು ಕ್ಷತ್ರಿಯ ವೀರರಾಗಿ ಪ್ರಸಿದ್ಧವಾದ ಇಕ್ಷ್ವಾಕು ವಂಶೀಕರಾಗಿ ಎಂಥ ಮಾನಸಿಕ ಕ್ಲೇಶವನ್ನು ಅನುಭವಿಸಿರಬಹುದು ? ಆ ಮಹಾತ್ಮರು ಒಬ್ಬನನ್ನೆ ಏಕೆ ಕರೆದರು ? ಲಕ್ಷ್ಮಣನೂ ಒಂದುಗೂಡಿದ ಮೇಲೆ ನಾವೂ ಹಿಂಬಾಲಿಸಬಹುದಿತ್ತಲ್ಲ. ಆ ದುರುಳ ರಾವಣನ ನಾಮವನ್ನೆ ಕೇಳಿ ಬೆಚ್ಚಿಬೆರಗಾಗಿ ಹೋದರಲ್ಲ ದಶದಿಕ್ಕುಗಳಿಗೂ ರಥವನ್ನು ಹರಿಸಿ ದೇವೇಂದ್ರನಿಗೇ ಸಹಾಯ ಮಾಡುತ್ತಿದ್ದ ನಮ್ಮ ತಂದೆ ? ನನ್ನನ್ನೂ ಕಳಿಸಿಕೊಡಿಯೆಂದು ಭರತ ಕೇಳದಿರುವನೆ ? ಕೇಳಿರಬಹುದು. ಶ್ರೀರಾಮನಿಂದಲೇ ಆ ಕಾರ್ಯ ಸಾಧ್ಯವೆಂದು ಮಹರ್ಷಿಗಳು ಹೇಳಿ ಕರೆದೊಯ್ದಿದ್ದಾರೆ, ಅವನ ಕಾರ್ಯಕ್ಷೇತ್ರದಲ್ಲಿ ನಿನ್ನ[illegible] ಪಾಲುಂಟೆಂದು ಮಹಾರಾಜ ಸಾಂತ್ವನಗೊಳಿಸಿರಬಹುದು. ಅಂ[illegible] ಭರತ ಆ ಸಂದರ್ಭದಲ್ಲಿ ಅರಮನೆಯಲ್ಲೇ ಇದ್ದನೆಂದೇ ಹೇಳಬಹುದು.

## ಮಿಥಿಲಾ ಯಾತ್ರೆ

ಶ್ರೀರಾಮನು ವಿಶ್ವಾಮಿತ್ರರ ಸಂಗಡ ಹೋದ ಹತ್ತು ಹದಿನೈದು ದಿನಗಳೊಳಗೆ ಜನಕಮಹಾರಾಜನಿಂದ ಮಗಳ ಮದುವೆಯ ಆಹ್ವಾನ ತ್ವರೆಯಿಂದ ಬಂತು. ಅಯೋಧ್ಯೆಯಿಂದ ಮಂತ್ರಿಗಳು ಪುರೋಹಿತರು, ರಾಣಿಯರು ಭರತ ಶತ್ರುಘ್ನರು—ಎಲ್ಲರೂ ಪ್ರಯಾಣ ಬೆಳೆಸಿ ಆ ನಗರವನ್ನು ಸಕಾಲದಲ್ಲಿ ಸೇರಿದರು. ಶಿವಧನುಸ್ಸನ್ನು ಎತ್ತಿ ಸೀತಾದೇವಿಯನ್ನು ಶ್ರೀರಾಮನು ಗೆದ್ದುದ್ದು ಅವರಿಗೆ ಗೊತ್ತಾಯಿತು. ತದ್ವಾರೇಣ ಲಕ್ಷ್ಮಣನಿಗೆ ಜನಕನ ಔರಸ ಪುತ್ರಿಯಾದ ಊರ್ಮಿಳಾ ದೇವಿಯನ್ನೂ, ಜನಕನ ತಮ್ಮನಾದ ಕುಶಧ್ವಜನ ಮಕ್ಕಳಾದ ಮಾಂಡವಿಯನ್ನು ಭರತನಿಗೂ ಶ್ರುತಕೀರ್ತಿಯನ್ನು ಶತ್ರುಘ್ನನಿಗೂ ಕೊಟ್ಟು ವಿವಾಹ ಮಹೋತ್ಸವವು ನೆರವೇರಿತು. ವಿಶ್ವಾಮಿತ್ರರು ತಪಸ್ಸಿಗೆ

ಹೊರಟುಹೋದರು. ದಶರಥ ಮಹಾರಾಜನು ಹರ್ಷೋನ್ಮತ್ತನಾಗಿ ಮಕ್ಕಳಿಗಿತ್ತ ಬಳುವಳಿ ಸಾಮಗ್ರಿಗಳ ಸಮೇತ ಮರುಪ್ರಯಾಣ ಬೆಳೆಸಿದನು. ಶ್ರೀರಾಮ ಏನುಮಾಡಿದರೂ ನನಗೂ ಪಾಲುಂಟೆಂದು ಭರತ ನಿರ್ಧರಿಸಿಕೊಂಡ.

### ಭಾರ್ಗವನ ಗರ್ವಭಂಗ, ಭರತನಿಗೂ ಮುಖಭಂಗ

ಅಯೋಧ್ಯಾಭಿಮುಖವಾಗಿ ಶ್ರೀರಾಮನ ವಿಜಯವನ್ನು ಸ್ಮರಿಸಿಕೊಳ್ಳುತ್ತ ಆನಂದಾತಿಶಯದಲ್ಲಿ ಮುಳುಗಿ ಪ್ರಯಾಣ ಬೆಳೆಸುತ್ತಿದ್ದಾಗ ಗಗನದಿಂದ ಬರಸಿಡಿಲು ಬಡಿಯಿತು. ಕಾರ್ಮೋಡ ಕವಿಯಿತು. ವೈಷ್ಣವ ಧನುಸ್ಸಿನ ಮಿಂಚಿನ ಕುಡಿಗಿಡಿಗಳು ಆವರಿಸಿದುವು. "ಎಲೌ ರಾಮ, ನಿನ್ನ ಸಂಗಡ ಯುದ್ಧಮಾಡಬೇಕೆಂದಿದ್ದೇನೆ, ಈ ಧನುಸ್ಸನ್ನು ಎತ್ತಿಹಿಡಿ ನೋಡುವೆ"ನೆಂದ ರುದ್ರ ಜಮದಗ್ನಿಯ ಪುತ್ರ. ಆ ಪರಶುರಾಮನನ್ನು ನೋಡಿದ ಕ್ಷಣವೇ ಪಿತನು ಮೂರ್ಛೆ ಹೋದುದನ್ನು ಭರತ ನೋಡಿದ. ನಮ್ಮಪ್ಪ ಇಂಥ ಅಂಜುಬುರುಕನೆ? ನಮ್ಮಂಥ ವೀರರು ಅವನ ಹೆ[illegible]ಯಲ್ಲಿ ಹೇಗೆ ಜನ್ಮ ತಾಳಿದೆವು ಎಂದು ಕೊರಗಿದ. ಆದಂತಿರಲಿ, ಈ ಕೊ[illegible] ರಾಮನು ನಮ್ಮನ್ನಾಗಲಿ, ದಶರಥನನ್ನಾಗಲಿ ಕದನಕ್ಕೆ ಕರೆಯದೆ ಶ್ರೀರಾಮನನ್ನೇ ಕರೆದನಲ್ಲ. ಹಾಗಾದರೆ ನಾವೆಲ್ಲಾ ನಿರ್ವೀರ್ಯರೆ? ಎಂದು ಮೂವರು ಅಣ್ಣತಮ್ಮಂದಿರೂ ಶಸ್ತ್ರಪಾಣಿಗಳಾದರು. ಶ್ರೀರಾಮನ ಇಂಗಿತವನ್ನರಿತು ತಟಸ್ಥರಾದರು. ಶ್ರೀರಾಮನು ಮಹಾ ವೈಷ್ಣವ ಧನುಸ್ಸನ್ನೂ ನಿರಾಯಾಸವಾಗಿ ಎತ್ತಿಹಿಡಿದು "ಈ ನನ್ನ ಬಾಣಪ್ರಯೋಗ ನಿರರ್ಥಕವಾಗುವುದಿಲ್ಲ, ಇದಕ್ಕೆ ಬಲಿ ಕೊಡಲೇ ಬೇಕು, ಏನು ಕೊಡುವೆ" ತಿಳಿಸೆಂದ. "ನನ್ನ ತಪಸ್ಸನ್ನು ಧಾರೆಯೆರೆದು ಮಹೇಂದ್ರ ಪರ್ವತಕ್ಕೆ ಮತ್ತೆ ತಪಸ್ಸಿಗೆ ಹೋಗುವೆನು" ಎಂದ ಪರಶುರಾಮ. ಹಾಗೆಯೇ ಸಂಭವಿಸಿತು. ಎಲ್ಲ ಘಟನೆಗಳೂ ಅಣ್ಣನಿಗೇ ಸಂಭವಿಸುತ್ತವೆ. ಮುಂದೆ ಇನ್ನೇನನ್ನು ಮಾಡುವನೊ, ಅವುಗಳಲ್ಲಿ ನನಗೂ ಪಾಲುಗೊಡುವನೋ ಅಥವಾ ಸ್ವಕೀರ್ತಿಯ ಸ್ವಾರ್ಥಕ್ಕೆ ಮಣಿಯುವನೊ ಎಂದು ಭರತನು ಗುಣಿಸಿದ. ಹಾಗೆ ಶ್ರೀರಾಮನು ಮಾಡುವವನಲ್ಲವೆಂದೂ ವಿಶ್ವಾಸವನ್ನು ತಾಳಿದ. ಪ್ರಯಾಣ ಬೆಳೆದು ಅರಮನೆಯನ್ನು ಸೇರಿದನು. ಈ ಅವಧಿಯಲ್ಲಿ

ವಿಶ್ವಾಮಿತ್ರರು ಕರುಣಿಸಿದ ಧನುರ್ವಿದ್ಯಾದಿಗಳನ್ನೂ, ಆ ಪ್ರಚಂಡ ತಾಟಕಿ ಸುಬಾಹುಗಳ ವಧೆಯನ್ನೂ, ವಾಯವ್ಯಾಸ್ತ್ರದಿಂದ ಮಾರೀಚನು ಸಾವಿರ ಯೋಜನಗಳಾಚೆ ಜೀವಸಹಿತ ಬಿದ್ದುದನ್ನೂ, ಸಾಕ್ಷಾತ್ ಇಂದ್ರನೇ ವಿಶ್ವಾಮಿತ್ರ ಶ್ರೀರಾಮರಿಗೆ ದರ್ಶನಕೊಟ್ಟುದನ್ನೂ, ರಾಘವನು ಮುಂದೆ ಲೋಕ ಕಲ್ಯಾಣಕರವಾದ ದೇವಕಾರ್ಯವನ್ನು ಮಾಡಬೇಕಾಗಿದೆಯೆಂದು ಇಂದ್ರನೇ ಹೇಳಿ ಹೋದದ್ದನ್ನೂ—ಕೇಳಿ ತಿಳಿದುಕೊಂಡನೊ ಅಥವಾ ನವ ಸತಿಯ ಮೋಹಪಾಶಕ್ಕೆ ಸಿಕ್ಕಿ ತೆಪ್ಪಗಿದ್ದನೊ ಗೊತ್ತಾಗುವುದಿಲ್ಲ. ಅಯೋಧ್ಯಾ ಅರಮನೆಯಲ್ಲಿ ತನ್ನ ಬಾಳು ಸವೆಯುತ್ತದೆ ಎಂಬ ನಂಬುಗೆಯಿಂದ ತನ್ನ ಗೃಹವನ್ನು ಪ್ರವೇಶಿಸಿದ. ತನ್ನ ಮದುವೆಗೆ ತನ್ನ ಸೋದರಮಾವನಾದ ಯುಧಾಜಿತು ಬಂದಿದ್ದುದ್ದು ಆಶ್ಚರ್ಯಕರವಾಗಿತ್ತು.

ವ್ಯಕ್ತಿತ್ವದ ಬೆಳೆವಣಿಗೆಗೆ ಪ್ರತ್ಯೇಕ ಕ್ಷೇತ್ರ ದಶರಥನಿಂದ ನಿರ್ಮಿತವಾಯಿತು.

ವಿವಾಹಾನಂತರ ಭರತ ಮಾಂಡವಿಯರು ಕೆಲವುಕಾಲ ಅಯೋಧ್ಯಾ ಅರಮನೆಯಲ್ಲಿದ್ದರು. ಯುಧಾಜಿತ್ ಕೂಡ ಮಿಥಿಲೆಯಿಂದ ಬಂದು ಅಯೋಧ್ಯೆಯಲ್ಲೆ ಉಳಿದು[illegible]ದ್ದ. ಆಗ ದಶರಥನು ಭರತನನ್ನು ಕರೆದು ಹೀಗೆಂದನು "ಮಗು, ನಿನ್ನ ಸೋದರಮಾವನಾದ ಯುಧಾಜಿತನು ನಿನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ ಬಂದವನು. ಅದಕ್ಕೋಸ್ಕರ ಅವನು ಇಲ್ಲಿಯೇ ಇದ್ದಾನೆ" ಎಂದು ಹೇಳಿದನು. ಭರತನು ದಶರಥನ ಈ ಸಂಮತಿ ವಾಕ್ಯವನ್ನು ಕೇಳಿ ಕೇಕಯ ದೇಶಕ್ಕೆ ಹೋಗಲು ಮನಸ್ಸುಮಾಡಿದನು. ಅವನೊಡನೆ ಹೊರಡಲು ಶತ್ರುಘ್ನನು ಸಿದ್ಧನಾದನು. ಭರತ ಶತ್ರುಘ್ನರು ತಮ್ಮ ತಂದೆಗೂ ಧರ್ಮಾತ್ಮನಾದ ಶ್ರೀರಾಮನಿಗೂ ತಾಯಂದಿರಾದ ಕೌಸಲ್ಯೆ ಸುಮಿತ್ರೆ ಕೈಕೇಯಿಯರಿಗೂ ಹೋಗಿ ಬರುತ್ತೇವೆಂದು ತಿಳಿಸಿದರು. ಯುಧಾಜಿತನಿಗೆ ಭರತ ಶತ್ರುಘ್ನರು ತನ್ನೊಡನೆ ಬರುವರೆಂಬುದನ್ನು ಕೇಳಿ ಆನಂದವಾಯಿತು. ಅವನು ಭರತ ಶತ್ರುಘ್ನರನ್ನು ಕರೆದುಕೊಂಡು ತನ್ನ ನಗರಕ್ಕೆ ಪ್ರಯಾಣ ಮಾಡಿದನು (ಬಾಲ. ಸ. ೭೭ ಶ್ಲೋ. ೧೭–೨೨).

ಸೋದರಮಾವನ ಮನೆಯಲ್ಲಿ ಸೋದರಳಿಯನಿಗೆ ಸಲಿಗೆ ಸ್ವಾಭಾವಿಕ. ಈಗ ಮಾಂಡವಿಯೂ ಜತೆಗೂಡಿದ್ದಾಳೆ. ಅವಳೂ ಕೆಲವು ದಿನಗಳು ಕಳೆದ

ಮೇಲೆ ನಿಸ್ಸಂಕೋಚವಾಗಿ ವರ್ತಿಸಬಹುದು. ಆದರೆ ಶತ್ರುಘ್ನ ಮತ್ತು ಶ್ರುತಕೀರ್ತಿಯರಿಗೆ ಎಷ್ಟೇ ಆದರೂ ಸಂಕೋಚವೇ. ಆತಿಥ್ಯ ಆದರಗಳು ಸಮೃದ್ಧವಾಗಿದ್ದರೂ ಬಂಧುಗಳ ಮನೆಯಾಯಿತೇ ಹೊರತು ಕುಶಧ್ವಜನ ಅರಮನೆಯು ವಿನೋದ ವಿಶ್ರಾಂತಿ ಗೃಹವಾಗಬಲ್ಲುದೆ? ಇದನ್ನು ಸ್ವತಃ ಭರತನೇ ಅರಿಯದಿದ್ದರೂ ತನ್ನ ಪ್ರಿಯೆ ಮಾಂಡವಿಯು ಮುಖಾಂತರ ಅರಿತು ಅವಳ ಮುಖೇನ ಅವಳ ತಂಗಿ ಶ್ರುತಕೀರ್ತಿಯ ಮನಃ ಕ್ಲೇಶವನ್ನು ನಿವಾರಿಸುವಂತೆ ವ್ಯವಸ್ಥೆಯನ್ನು ಮಾಡಿರಬಹುದು. ಸ್ವಲ್ಪಕಾಲವಾದ ಮೇಲೆ ಆ ನಾಲ್ವರೂ ಅಯೋಧ್ಯೆಗೆ ಹೋಗಬೇಕೆಂಬ ಬಯಕೆ ಕಿರಿದಾಗದೆ ಇದ್ದಿರಲಾರದು. ಇಂಥ ಇಚ್ಛೆ ಮನುಷ್ಯರಿಗೆ ಸ್ವಾಭಾವಿಕವಾದದ್ದು. ಅಯೋಧ್ಯೆಯಲ್ಲಿದ್ದರೆ ಅಧಿಕಾರವೂ ಹಿಂದೆಯೇ ಇರುತ್ತದೆ. ತೌರಿನಲ್ಲಾದರೆ ತಪ್ಪು ಮಾಡಿದರೂ ಒಪ್ಪವೇ ಆಗುತ್ತದೆ. ಇದು ಬಂಧುತ್ವದ ಸಹಜಗುಣ. ಭರತನಿಗೆ ಈ ವಿಚಾರದಲ್ಲಿ ಸ್ವಲ್ಪ ಒಳನೋಟವಿರಬೇಕಾದರೆ ಲೋಕಾನುಭವ ಸ್ವಲ್ಪವಾದರೂ ಇರಬೇಕು. ಅದಕ್ಕೆ ಅವಕಾಶವಿದ್ದರೂ ಅದನ್ನು ವಿವೇಚನಾಪೂರ್ವಕವಾಗಿ ಬಳಸಿಕೊಳ್ಳಲಿಲ್ಲವೆಂಬುದು ಅವನ ಭವಿಷ್ಯ ನಡಾವಳಿಯಿಂದ ವ್ಯಕ್ತವಾಗುತ್ತದೆ. ಕ್ಷತ್ರಿಯನಾದ್ದರಿಂದ ಧನುರ್ವಿದ್ಯೆಯಲ್ಲಿ ಆಸಕ್ತಿವಹಿಸಿರಬೇಕು. ಜ್ಞಾನಾರ್ಜನೆಯನ್ನು ಅಪಾರವಾಗಿ ಮುಂದುವರಿಸಿ ಚಿಂತನಾಶಕ್ತಿಯನ್ನೂ ವೈಚಾರಿಕತೆಯನ್ನೂ ವೃದ್ಧಿಗೊಳಿಸಿಕೊಂಡು ಒಬ್ಬ ಮಹತ್ವಪೂರ್ಣವಾದ ರಾಜಕಾರಣಿಯಾಗಬಹುದಿತ್ತು. ರಾಜಕುಮಾರನಾಗಿ ಪ್ರಜೆಗಳ ಜೀವನ ಪರಿಚಯ ಮಾಡಿಕೊಳ್ಳಬಹುದಿತ್ತು. ಭರತನಿತ್ತ ಬಂದ ಮೇಲೆ ಶ್ರೀರಾಮ ಹಾಗೆಯೇ ನಡೆದುಕೊಂಡು ಸರ್ವರ ಪ್ರೀತಿಗೂ ಗೌರವಕ್ಕೂ ಪಾತ್ರನಾದನು. ತಾನೇ ಶ್ರೀರಾಮನ ಹಿಂದಿನವನಾಗಿ ಲಕ್ಷ್ಮಣನಿಗೆ ಅಣ್ಣನಾಗಿದ್ದದ್ದರಿಂದ ಯುವರಾಜನ ಧರ್ಮ, ಕರ್ತವ್ಯಗಳು ತನ್ನ ಮೇಲಿವೆ ಎಂದು ತಿಳಿದು ಅದಕ್ಕೆ ತಕ್ಕಂತೆ ತನ್ನ ನಡಾವಳಿಗಳನ್ನು ತಿದ್ದಿಕೊಳ್ಳಬಹುದಿತ್ತು. ದಾಂಪತ್ಯದ ಪ್ರಾರಂಭದ ದಿನಗಳಾದ್ದರಿಂದ ದಾಂಪತ್ಯ ಜೀವನದಲ್ಲಿ ನಿಷ್ಕಾಮಂತನಾಗಿರಬಹುದು. ಆ ನಾಲ್ವರು ಸಹೋದರರಾರೂ ತಮ್ಮ ರಾಜಕುಮಾರ ಪದವಿಯ ಅಧಿಕಾರವನ್ನು ಬಳಸಿಕೊಳ್ಳಲಿಲ್ಲ. ಭರತನ ಭವಿಷ್ಯ ನಡಾವಳಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇ

ಇವನ ಹುಟ್ಟುಗುಣಗಳು ಸ್ವಚ್ಛಂದವಾಗಿ ವೃದ್ಧಿಗೊಂಡಂತೆ ಕಾಣುತ್ತವೆ. ಅವನ ಸ್ವಭಾವ, ಗುಣಗಳಲ್ಲಿ ಸಾರ್ವಭೌಮಿಕವಾಗಿದ್ದದ್ದು ಭಾವುಕತೆ; ಉದ್ವಿಗ್ನತೆ; ಸಂವೇದನಾಶೀಲತೆ. ಭ್ರಾತೃಪ್ರೇಮವು ಅತಿರೇಕವೆನ್ನುವಷ್ಟು ವೃದ್ಧಿಗೊಂಡಿತ್ತು. ವೈಚಾರಿಕತೆ ಅವನ ಬೆನ್ನುಹತ್ತಿದ್ದರೆ ತನ್ನ ಈ ಹನ್ನೆರಡು ವರ್ಷಗಳ ಕಾಲ ರಾಜಗೃಹದಲ್ಲೇ ವಾಸಮಾಡಬೇಕಾದ್ದರ ಕಾರಣಗಳನ್ನು ಕಂಡುಕೊಳ್ಳುತ್ತಿದ್ದ. ಭವಿಷ್ಯದ ಹದಿನಾಲ್ಕು ವರ್ಷಗಳ ಕಠೋರತಾಪಸೀ ಜೀವನ ಒದಗುತ್ತಿರಲಿಲ್ಲ. ತನ್ನ ಸಹೋದರರಲ್ಲಿ, ಅವರಲ್ಲೂ ಶ್ರೀರಾಮನಲ್ಲಿ ಹೇಗೆ ನಡೆದುಕೊಂಡನೋ ಅದೇ ರೀತಿಯಲ್ಲಿ ಮಾತಾಪಿತೃಗಳೊಡನೆ ವ್ಯವಹರಿಸುವ ಜ್ಞಾನವನ್ನು ಗಳಿಸಲಿಲ್ಲ. ತಾಯಿತಂದೆಯರನ್ನು ಸರಿಯಾಗಿ ಅರಿತುಕೊಳ್ಳದೆ ದುಡುಕುಸ್ವಭಾವವನ್ನು ತಾತನ ಮನೆಯಲ್ಲಿ ಬೆಳೆಸಿಕೊಂಡ. ಗುರುಹಿರಿಯರನ್ನು ನಿಂದಿಸುವ ಧೈರ್ಯವನ್ನು ಸಂಪಾದಿಸಿದ. ಅವನ ಹುಟ್ಟುಗುಣಗಳಲ್ಲೊಂದಾದ ಸಂವೇದನಾಶಕ್ತಿ ಅಗಾಧವಾಗಿ ಬೆಳೆದು ಅಭಿವ್ಯಕ್ತಗೊಳ್ಳಲು ತವಕಪಡುವಂತಿತ್ತು. ಭವಿಷ್ಯದ ಹದಿನಾಲ್ಕು ವರ್ಷಗಳಲ್ಲಿ ಅದು ಹಿಮಾಲಯದಂತೆ ಕಾಣಿಸಿಕೊಂಡಿತು. ಸರಳಸ್ವಭಾವದವನೂ ಮುಗ್ಧನೂ ಆದ ಭರತನು ರಾಜಗೃಹ ವಾಸದಲ್ಲಿ ರಾಜತಂತ್ರ, ಕುಟಿಲತಂತ್ರ, ಕಾರ್ಯತಂತ್ರ ಇವುಗಳಾವನ್ನೂ ಅರಿಯುವ ಶಕ್ತಿಯನ್ನು ಬೆಳೆಸಿಕೊಳ್ಳಲಾರದೆ ಹೋದನು. ಅವನ ವರ್ತನೆಯಲ್ಲಿ ದೃಢತೆ ಎಷ್ಟುಬೇಕೊ ಅಷ್ಟನ್ನು ಸಂಪಾದಿಸಿಕೊಂಡಿದ್ದ. ಅಯೋಧ್ಯೆಯನ್ನು ರಾಮಲಕ್ಷ್ಮಣರನ್ನು ತಂದೆತಾಯಂದಿರನ್ನು ನೋಡುವ ಬಯಕೆ ತೀವ್ರವಾಗಿದ್ದರೂ ಅಯೋಧ್ಯೆಗೆ ಹೋಗಲಾರದವನಾಗಿದ್ದ. ಹಾಗಿರಬೇಕೆಂದು ಯಾರ ಕಟ್ಟಪ್ಪಣೆಯೊ ಅವನಿಗೇ ಗೊತ್ತಾಗಲಿಲ್ಲ. ತಂದೆಯದೊ ತಾಯಿಯದೊ ? ಸ್ವಪ್ನಶಾಸ್ತ್ರದಲ್ಲಿ ಮರಣಕ್ಕೆ ಸಂಬಂಧಪಟ್ಟ ಯಾವಾವ ರೀತಿಯ ಸ್ವಪ್ನಗಳು ಬೀಳಬೇಕೋ ಅವೆಲ್ಲವು ಒಂದು ದಿವಸ ಬಿದ್ದುವು. ಬಹಳ ಖಿನ್ನನಾದ.

" ಇಮಾಂ ಹಿ ದುಃಖಪ್ರಗತಿಂ ನಿಶಮ್ಯತಾಂ
ಅನೇಕ ರೂಪಾಮವಿತರ್ಕಿತಾಂ ಪುರಾ ।
ಭಯಂ ಮಹತ್ತದ್ಧೃದಯಾನ್ನಯಾತಿಮೇ
ವಿಚಿಂತ್ಯರಾಜಾ ನಮಚಿಂತ್ಯ ದರ್ಶನಮ್ " ।।

"ಈ ಪ್ರಕಾರ ದುಃಸ್ವಪ್ನವು ನಾನಾ ರೂಪದಲ್ಲಿ ಕಾಣಿಸಿತು. ನನಗೆ ಹಿಂದೆ ಯಾವಾಗಲೂ ಇಂಥ ದುಃಸ್ವಪ್ನವು ಬಿದ್ದುದೇ ಇಲ್ಲ. ಮಹತ್ತರವಾದ ಭಯವು ನನ್ನ ಮನಸ್ಸಿನಲ್ಲಿ ನಾಟಿದೆ. ಈಗಲೇ ಮಹಾರಾಜನನ್ನು ನೋಡಿ ಬಿಡೋಣವೆಂದರೂ ಸಾಧ್ಯವಿಲ್ಲ. ಆದ್ದರಿಂದ (ಸ್ವಪ್ನದಲ್ಲಿ ಕಂಡ ಆತನ ಸ್ಥಿತಿಯನ್ನು ನೆನೆಸಿಕೊಂಡರೆ) ನನ್ನ ಭಯ ಹೋಗುವುದೇ ಇಲ್ಲ" ಎಂದು ಹೇಳಿದನು (ಅಯೋ. ಸ. ೭೦. ಶ್ಲೋ. ೨೧). ತಾನು ಹೇಳಿ ಕಳಿಸುವ ವರೆಗೂ ಅವನು ರಾಜಗೃಹದಲ್ಲೇ ಇರಬೇಕೆಂದು ದಶರಥನ ಕಟ್ಟಪ್ಪಣೆ ಯಾಗಿತ್ತೆ ? ಇದ್ದರೂ ಇರಬಹುದು. ದಶರಥನಿದ್ದ ಅವಸ್ಥೆಯಲ್ಲಿ ಈ ರಾಜ ತಂತ್ರವಿದೆ ಎನ್ನಬಹುದು ! ಅಯೋಧ್ಯೆಯಿಂದ ದೂತರು ಬಂದರು. ರಾಜನ ಮರಣ ವಾರ್ತೆಯನ್ನು ನೇರವಾಗಿ ತಿಳಿಸಲಿಲ್ಲ. ತ್ವರೆಯಿಂದ ಅಯೋಧ್ಯೆಗೆ ಪ್ರಯಾಣ ಬೆಳೆಸಬೇಕೆಂದು ಬಿನ್ನವಿಸಿದರು. ಭರತ ಅರಮನೆಯ ಕುಶಲವನ್ನು ವಿಚಾರಿಸಿಕೊಂಡ. "ನನ್ನ ತಾಯಿ ಕೈಕೇಯಿ ಕ್ಷೇಮವೆ ? ಅವಳು ಸ್ವಾರ್ಥಿ, ಹಠಮಾರಿ, ಕೋಪಿಷ್ಠೆ. ತಾನೇ ಬುದ್ಧಿಶಾಲಿಯೆಂದು ತಿಳಿದುಕೊಂಡಿದ್ದಾಳೆ. ಅವಳು ಏನು ಹೇಳಿ ಕಳಿಸಿದ್ದಾಳೆ" ಎಂದು ಕೇಳಿದ. (ಅಯೋ. ಸ. ೭೦. ಶ್ಲೋ. ೯–೧೦). ತ್ವರೆಯಿಂದ ಅಯೋಧ್ಯೆಗೆ ಪ್ರಯಾಣ ಬೆಳೆಸಿದ. ಅಯೋಧ್ಯೆಯು ಶ್ಮಶಾನಸಮಾನವಾಗಿದ್ದದ್ದನ್ನು ಕಂಡು ಕಡು ಶೋಕಕ್ಕೆ ಈಡಾದ, ಅರಮನೆಯನ್ನು ಸೇರಿದ.

### ಭರತನ ಭಾವೋದ್ರಿಕ್ತತೆಯ ದರ್ಶನ

ನೇರವಾಗಿ ತಾಯಿಯ ಬಳಿಗೆ ಹೋಗಿ ಅವಳ ಕುಶಲಪ್ರಶ್ನೆಗಳಿಗೆ ಉತ್ತರಿಸಿ "ತಂದೆ ಎಲ್ಲಿ, ಮೊದಲು ಅವನಿಗೆ ವಂದಿಸಬೇಕು" ಎಂದ. ಶಾಂತಚಿತ್ತಳಾಗಿಯೆ ಉತ್ತರಿಸಿದಳು. "ಎಲ್ಲರೂ ಎಲ್ಲಿಗೆ ಹೋಗುವರೊ ಅಲ್ಲಿಗೆ ಹೋದರು. ಪಂಚತ್ವವನ್ನು ಹೊಂದಿದನು" ಇಷ್ಟು ಹೇಳುವುದ ರೊಳಗೇ ಮುಂದುವರಿದು "ಅಪ್ಪ ಸದಾ ನಿನ್ನ ಬಳಿಯೇ ಇರುತ್ತಿದ್ದನಲ್ಲ, ಈಗ ಕೌಸಲ್ಯಾದೇವಿಯ ಬಳಿಗೆ ಹೋಗಿರಬಹುದೆ ?" ಎಂದು ಕೇಳಿದ, ಉತ್ತರ ಸಿಕ್ಕಿದ ಮೇಲೆ ಭಾವಾವೇಶದಿಂದ ಮೂರ್ಛಿತನಾದ. ಕೈಕೇಯಿಯು ಶಾಂತಮನಸ್ಕಳಾಗಿಯೇ ಇದ್ದಳು. ಭರತ ಬಹು ವಿಲಪಿಸಿದ. ಆಗ ಕೈಕೇಯಿ

" ಏಳು ಏಳು, ನೀನು ಅದೃಷ್ಟವಂತ. ಧೈರ್ಯವನ್ನು ತಾಳು " ಎಂದು ಪ್ರಶಂಸಿಸಿದಳು. " ನನ್ನನ್ನು ತ್ವರೆಯಿಂದ ಕರೆಸಿದ್ದು ಶ್ರೀರಾಮನ ಪಟ್ಟಾಭಿಷೇಕಕ್ಕಿರಬಹುದೆಂದು ಗುಣಿಸಿದೆ. ಅಪ್ಪನ ಸಂಸ್ಕಾರ ಕ್ರಿಯೆಗಳನ್ನು ನಡೆಸಿದ ರಾಮಲಕ್ಷ್ಮಣರೇ ಧನ್ಯರು. ಅವನಿಗೆ ನಾನು ದಾಸ. ಹೇಳಿ ಕಳಿಸಮ್ಮ. ತಂದೆಯು ಚರಮ ಸಂದೇಶವೇನಮ್ಮ " ಎಂದ. " ಭರತ, ಮಹಾರಾಜನು ಹಾ ರಾಮ! ಸೀತೆ! ಲಕ್ಷ್ಮಣ! ಎಂದು ಕೂಗುತ್ತ ಪರಲೋಕವನ್ನು ಸೇರಿದನು. ಸೀತೆಯೊಡನೆ ಹಿಂದಿರುಗಿಬರುವ ರಾಮನನ್ನೂ ಮಹಾಬಾಹುವಾದ ಲಕ್ಷ್ಮಣನನ್ನು ಪುನಃ ಯಾರು ನೋಡುವರೊ ಅವರೇ ಧನ್ಯರು. ಇದು ಆತನ ಚರಮ ಸಂದೇಶ " ಎಂದಳು. ಭರತನ ಪ್ರಶ್ನೆಗೆ ಮತ್ತೆ ಉತ್ತರಿಸುತ್ತ " ವತ್ಸ, ಆ ರಾಜಪುತ್ರನು ನಾರು ಬಟ್ಟೆಯನ್ನುಟ್ಟು ಸೀತಾಲಕ್ಷ್ಮಣರೊಡನೆ ದಂಡಕಾರಣ್ಯಕ್ಕೆ ಹೊರಟುಹೋದನು " ಎಂದಳು. ಭರತನಿಗೆ ವಿಪರೀತ ಭಯವಾಯಿತು. ಅಪ್ರಿಯ ಕೂರಂಬುಗಳ ಹೊಡೆತ. ಆಗಿನ ಕಾಲದಲ್ಲಿ ರಾಜಕುಮಾರರು ಮಾಡುತ್ತಿರಬಹುದಾದ ದುರ್ವರ್ತನೆಗಳನ್ನು ಆಧರಿಸಿ " ರಾಮನು ಯಾವ ಬ್ರಹ್ಮಸ್ವವನ್ನೂ ಅಪಹರಿಸಲಿಲ್ಲವಷ್ಟೆ ? ನಿರಪರಾಧಿಯಾದ ಹಣವಂತನನ್ನೋ ಬಡವನನ್ನೋ ಕೊಂದಿಲ್ಲವಷ್ಟೆ ? ಯಾವ ಪರಸ್ತ್ರೀಯನ್ನೂ ಬಯಸಲಿಲ್ಲವಷ್ಟೆ ? ಭ್ರೂಣಹತ್ಯೆ ಮಾಡಿದನೋ ಎಂಬಂತೆ ಅವನನ್ನು ಕಾಡಿಗೆ ದೂಡಲು ಕಾರಣವೇನು ? " ಎಂದು ಕೇಳಿದನು. ಕೈಕಾದೇವಿಯು ಮತ್ತೆ " ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡುವ ಸುದ್ದಿ ನನಗೆ ಮುಟ್ಟಿತು. ಆಗ ರಾಜ್ಯವನ್ನು ನಿನಗೆ ಕೊಡಬೇಕೆಂದೂ ರಾಮನನ್ನು ಹೊರಗಟ್ಟಬೇಕೆಂದೂ ಬೇಡಿಕೊಂಡೆ. ಸತ್ಯವ್ರತನಾದ ನಿನ್ನ ತಂದೆ 'ತಥಾಸ್ತು' ಎಂದು ಹೇಳಿ ಮಗನ ಮೇಲಿನ ಮೋಹಾಘಾತಕ್ಕೆ ಸಿಕ್ಕಿ ಮರಣಹೊಂದಿದ. ಈಗ ನೀನು ನಿರಾತಂಕವಾಗಿ ರಾಜನಾಗು " ಎಂದಳು. ಶ್ರಾದ್ಧಕರ್ಮಗಳನ್ನು ಮುಗಿಸಿ ವಿಧ್ಯುಕ್ತವಾಗಿ ಶೀಘ್ರವಾಗಿ ಪಟ್ಟಾಭಿಷಿಕ್ತನಾಗೆಂದಳು.

**ಶತಾಪರಾಧ ಮಾಡಿದರೂ ತಾಯಿ ತಾಯಿಯೆ !!**
**ಇದನರಿಯದಾದ ಮಹಾತ್ಮ ಭರತ**

ಈ ತತ್ತ್ವವನ್ನು ಅರಿಯದೆ ಹೋದ ಭರತ. ಭ್ರಾತೃತ್ವದ ಭಾವಾ

ವೇಶದ ಬಲೆಗೆ ಬಿದ್ದ. ವೈಚಾರಿಕತೆ ಮೊಳೆಯಲೇ ಇಲ್ಲ. ಕುಲಘಾತಕಿ, ಗಂಡನನ್ನು ಕೊಂದವಳು, ರಾಮನನ್ನು ಕಾಡಿಗೆ ಕಳಿಸಿದೆ, ಕಾರಣವೇನು? ಕೌಸಲ್ಯಾ ಸುಮಿತ್ರೆಯರಿಬ್ಬರೂ ಪುತ್ರಶೋಕದಿಂದ ಮೃತಿ ಹೊಂದಿರಬಹುದೆ? ಶ್ರೀರಾಮನು ಹಡೆದ ತಾಯಿಗಿಂತ ನಿನ್ನನ್ನೇ ಹಿರಿದಾಗಿ ಪ್ರೀತಿಸುತ್ತಿದ್ದನಲ್ಲ? ಶ್ರೀರಾಮನಲ್ಲಿ ನಾನು ಯಾವ ಭಾವನೆಯನ್ನಿಟ್ಟುಕೊಂಡಿದ್ದೇನೆಂಬುದನ್ನು ನೀನು ತಿಳಿಯದೆ ಹೋದದ್ದರಿಂದ ನಿನಗೆ ರಾಜ್ಯಲೋಭ ಮಂಕುಹಿಡಿಸಿತು. ಮಗನಿಗಾಗಿ ಇಷ್ಟು ದುರಾಸೆಯನ್ನು ತೋರಿಸಿದ ನಿನ್ನ ಆಸೆಯನ್ನು ಮಾತ್ರ ನಾನು ನಡೆಸುವುದಿಲ್ಲ. ಶೀಲಭ್ರಷ್ಟೆ! ರಘುಕುಲದಲ್ಲಿ ಜ್ಯೇಷ್ಠಪುತ್ರನಿಗೇ ರಾಜ್ಯದ ಪಟ್ಟಾಭಿಷೇಕ. ಉಳಿದ ಸೋದರರು ಅವನ ಸೋದರಸೇವಕರು. ತುಚ್ಛ ಬುದ್ಧಿಯ ಘಾತಕಿ, ಪಾಪಿ, ನನಗೆ ಮರಣ ಸಂಕಟವನ್ನು ಮಾತೆಯಾಗಿ ತಂದೊಡ್ಡಿದ್ದೀಯೆ. ಶ್ರೀರಾಮನು ಕೋಪಿಸಿಕೊಳ್ಳುವನೆಂದು ನಿನ್ನನ್ನು ವಧಿಸದೆ ಬಿಟ್ಟಿದ್ದೇನೆ. ನಿನ್ನ ಆಸೆಯನ್ನು ಖಂಡಿತ ನೆರವೇರಿಸುವುದಿಲ್ಲ. ಅಣ್ಣನನ್ನು ಹಿಂದಿರುಗಿ ಕರೆದುಕೊಂಡು ಬರುವೆನು. ನಿನಗೆ ಸಂಕಟವಾಗಲೆಂದೇ ಹೀಗೆ ಮಾಡುವೆನು. ಘೋರವಾದ ಸನ್ನಾಸದಿಂದ ಇಂಥ ಪಾಪಕೃತ್ಯವನ್ನು ಮಾಡಿದ್ದೀಯೆ. ಈ ಜಗತ್ತಿನಲ್ಲಿ ಕೆಟ್ಟ ಹೆಸರು ನಿನಗೆ ಗಂಟುಬಿತ್ತು. ಎಲೇ, ತಾಯಿಯೆಂಬ ಹೆಸರಿನ ನನ್ನ ವೈರಿ, ಎಲೇ ಪಾಪಿ, ನೀನು ಮಾಡಿದ ಪಾಪ ಕೃತ್ಯವನ್ನು ನಾನು ಹೊರಲಾರೆ. ನೀನು ಬೆಂಕಿಗಾದರೂ ಬೀಳು. ದಂಡ ಕಾರಣ್ಯಕ್ಕಾದರೂ ಹೋಗು. ಕೊರಳಿಗೆ ನೇಣನ್ನಾದರೂ ಬಿಗಿದುಕೊ! ಇದನ್ನು ಬಿಟ್ಟರೆ ನಿನಗೆ ಬೇರೆ ಗತಿಯೇನಿದೆ?" ಎಂದು ಕ್ರೂರವಾಗಿ ನಿಂದಿಸಿದ. ಹೀಗೆ ಭರತನು ಅರಣ್ಯದಲ್ಲಿ ಅಂಕುಶತೋಮರಗಳಿಂದ ತಿವಿಯಲ್ಪಟ್ಟ ಆನೆಯಂತೆ ಕೆರಳಿ ರೊಚ್ಚಿಗೆದ್ದ ಸರ್ಪದಂತೆ ಬುಸುಗುಡುತ್ತ, ಕೊನೆಗೆ ನೆಲದ ಮೇಲೆ ಬಿದ್ದುಬಿಟ್ಟನು.

### ಕೌಸಲ್ಯಾ ಸುಮಿತ್ರೆಯರ ದರ್ಶನ

ಭರತಾಗಮನವನ್ನು ತಿಳಿದ ಮಂತ್ರಿಗಳು ಭರತನನ್ನು ಭೇಟಿಯಾದರು. ಅವರೆದುರಿಗೆ ತಾಯಿಯನ್ನು ನಿಂದಿಸಿ ಈಗ ನಡೆದುಹೋದ ಯಾವೊಂದು ಘಟನೆಯೂ ತನಗೆ ಗೊತ್ತಿಲ್ಲವೆಂದು ಹೇಳಿ ತನ್ನ ಮುಗ್ಧತೆಯನ್ನು ವ್ಯಕ್ತ

ಪಡಿಸಿದ. ಭರತನ ಕಂಠಶಬ್ದವನ್ನು ಕೇಳಿ ಕೌಸಲ್ಯೆ ಸುಮಿತ್ರೆಗೆ ಹೇಳಿದಳು. "ಕ್ರೂರಳಾದ ಕೈಕೇಯಿಯ ಮಗನು ಬಂದಂತೆ ಕಾಣುತ್ತದೆ. ಭರತನು ದೀರ್ಘದರ್ಶಿ—ವಿಚಾರಶೀಲ, ಅವನನ್ನು ನೋಡಬೇಕೆಂದಿದ್ದೇನೆ". ಅದೇ ಸಮಯಕ್ಕೆ ಭರತ ಶತ್ರುಘ್ನರು ಅವಳತ್ತ ಬರುತ್ತಿದ್ದರು. ಆಗಲೇ ಕೌಸಲ್ಯೆ ಹೊರಬಂದಿದ್ದಳು. ಮಕ್ಕಳ ಮುಖಗಳನ್ನು ನೋಡಿ ಮೂರ್ಛಿತಳಾಗಿ ಭೂಮಿಗೊರಗಿದಳು. ಆ ಕ್ಷಣಕ್ಕೆ ಸರಿಯಾಗಿ ಭರತ ಶತ್ರುಘ್ನರು ಓಡಿಬಂದು ದೊಡ್ಡಮ್ಮನನ್ನು ಹಿಡಿದುಕೊಂಡರು. ಚೇತರಿಸಿಕೊಂಡ ರಾಮಮಾತೆ ಹೀಗೆಂದಳು "ಭರತ, ನಿನಗೆ ಬೇಕಾಗಿದ್ದ ರಾಜ್ಯವು ನಿಷ್ಕಂಟಕವಾಗಿ ದೊರಕಿದೆ! ಕೈಕೇಯಿಯ ಕ್ರೂರವಾದ ಕಾರ್ಯತಂತ್ರದಿಂದ ನಿನ್ನ ಬಯಕೆ ಶೀಘ್ರವಾಗಿಯೇ ಕೈಗೂಡಿತು. ಆದರೆ ಅವಳು ಕ್ರೂರದೃಷ್ಟಿಯಿಂದ ನನ್ನ ಮಗನಿಗೆ ನಾರುಬಟ್ಟೆಯುಡಿಸಿ ವನವಾಸಕ್ಕೆ ಕಳಿಸಿದಳಲ್ಲ, ಆದರಿಂದ ಅವಳಿಗೆ ಬಂದ ಲಾಭವೇನು ?...ಅಗ್ನಿಹೋತ್ರದ ಸಮೇತ ನನ್ನನ್ನು ರಾಮನಲ್ಲಿಗೆ ನೀನೇ ಕರೆದುಕೊಂಡು ಹೋಗಿಬಿಡು". ಭರತನಿಗೆ ಹುಣ್ಣನ್ನು ಸೂಜಿಯಿಂದ ಚುಚ್ಚಿದಂತಾಯಿತು. ತಲೆ ತಿರುಗಿತು. ಅವನು ಕೌಸಲ್ಯೆಯ ಪಾದಗಳಮೇಲೆ ಬಿದ್ದು ಅತ್ತು ಅತ್ತು ಎಚ್ಚರತಪ್ಪಿದನು. "ಅಮ್ಮ ; ಏನನ್ನೂ ತಿಳಿಯದೆ ನಿರಪರಾಧಿಯಾದ ನನ್ನನ್ನು ಏಕೆ ದೂರುತ್ತೀಯೆ ? ಅಣ್ಣನಲ್ಲಿ ನನಗಿರುವ ದೃಢತೆಯನ್ನು ಶಪಥಮಾಡಿ ಹೇಳುತ್ತೇನೆ ಕೇಳಮ್ಮ" ಎಂದ.

## ಮೂರ್ತಿವೆತ್ತ ಮುಗ್ಧತೆ

ಕೌಸಲ್ಯೆಯ ಮಾರ್ಮಿಕವಾದ, ಕರುಳನ್ನು ಕೊರೆಯುವ ವಾಗ್ಬಾಣವನ್ನು ಸಹಿಸಲಾರದೆ ಭರತ ತನ್ನ ಮುಗ್ಧತೆಯನ್ನು ಕಣ್ಣಿಗೆ ಕಟ್ಟುವಂತೆ ವ್ಯಕ್ತಪಡಿಸಿದ. "ಶ್ರೀ ಸೀತಾರಾಮರು ವನವಾಸಕ್ಕೆ ಹೋದದ್ದು ಸಂಮತ ವೆಂದವನಿಗೆ ಗುರು ಕರುಣಿಸಿದ ಜ್ಞಾನ ನಶಿಸಲಿ. ಸೂರ್ಯನೆದುರಿಗೆ ಮಲ ವಿಸರ್ಜನೆಮಾಡಿದ ದೋಷ ಬರಲಿ. ಮಲಗಿರುವ ಹಸುವನ್ನು ಒದ್ದ ಪಾಪ ಮುತ್ತಲಿ. ಕೂಲಿಮಾಡಿಸಿಕೊಂಡು ಕೂಲಿಕೊಡದವನ ಪಾಪ ಬೆನ್ನುಹತ್ತಲಿ. ಆರನೆ ಒಂದು ಭಾಗ ಕಂದಾಯ ಸಲ್ಲಿಸಿದರೂ ಪ್ರಜೆಗಳನ್ನು ರಕ್ಷಿಸದಿರುವ ರಾಜನಿಗೆ ಬರುವ ಪಾಪ ಅವನಿಗೆ ಬರಲಿ. ಗುರುವಿಗೆ ಅವಮಾನ ಮಾಡಿದ

ಪಾಪ ಮೆತ್ತಿಕೊಳ್ಳಲಿ. ಮಿತ್ರದ್ರೋಹದ ಪಾಪ ಅವರನ್ನು ಪೀಡಿಸಲಿ. ಆಪ್ತರ ಗುಟ್ಟನ್ನು ರಟ್ಟುಮಾಡಿದ ಪಾಪ ಅವರಿಗೆ ಉರುಳಾಗಲಿ. ಕೃತಘ್ನನ ಪಾಪ ಅವರಿಗೆ ಕರುಳು ಕೊರೆಯುವ ಕುಟ್ಟೆಹುಳುವಾಗಲಿ. ಹೆಂಡತಿಯನ್ನು ಬಿಟ್ಟು ಮಿಂಡಗಾತಿಯೊಡನಾಡುವವನ ಪಾಪ ಅವರನ್ನು ಸದಾ ಪೀಡಿಸಲಿ. ಕುಡಿಯುವ ನೀರನ್ನು ಕೆಡಿಸುವವನ, ಅದಕ್ಕೆ ಪಾಷಾಣವನ್ನು ಹಾಕುವವನ ಪಾಪ ಅವರಿಗೆ ಬರಲಿ. ಕರುವಿಗೆ ಹಾಲನ್ನು ಬಿಡದೆ ಕರೆದುಕೊಳ್ಳುವವನ ಪಾಪ ಅವರನ್ನು ತ್ರಿಕಾಲದಲ್ಲೂ ಬಾಧಿಸಲಿ. ಮನೆಯಲ್ಲಿ ನೀರಿದ್ದು ಬಾಯಾರಿದವನಿಗೆ ನೀರು ಕೊಡದವನ ಪಾಪ ಅವರಿಗೆ ಬರಲಿ. ಜಿದ್ದಿನಿಂದ ಜನರು ಜಗಳವಾಡುತ್ತಿರುವಾಗ ಪರಿಹಾರ ಸಾಮರ್ಥ್ಯವಿದ್ದರೂ ಸುಮ್ಮನಿರುವ ಕಲಹ ಪ್ರಿಯನಿಗೆ ಬರುವ ಪಾಪ ಅವರಿಗೆ ಬರಲಿ ". ಈ ಸರ್ವಸಾಮಾನ್ಯವಾದ ಜ್ಞಾನಾತ್ಮಕವಾದ ಧರ್ಮಾಸ್ತ್ರದ ತಿರುಗು ಬಾಣಗಳನ್ನು ಬಿಟ್ಟು ಕೌಸಲ್ಯಾದೇವಿಯ ಪೂರ್ಣ ವಿಶ್ವಾಸವನ್ನು ಗಳಿಸಿದ. ಸಾಕ್ಷಾತ್ ಶ್ರೀರಾಮನೇ ಅವಳಿಗೆ ದರ್ಶನವಿತ್ತಂತಾಯಿತು. ಸಾಮಾನ್ಯವಾಗಿ ಮಲತಾಯಿಯ ಪ್ರೀತಿಯನ್ನು ಗಳಿಸುವುದು ಅಷ್ಟು ಸುಲಭವಲ್ಲ. ಭರತನ ಪ್ರಪ್ರಥಮ ವಿಜಯವಿದು. ವೇದಾರ್ಥ ಪ್ರತಿಪಾದನೆ ಮಾಡಲು ಸೃಷ್ಟಿಸಿದ ಕಾವ್ಯದಲ್ಲಿ ವಾಲ್ಮೀಕಿಯು ಈ ಸಂದರ್ಭದಲ್ಲಿ ಧರ್ಮವಿಶೇಷವನ್ನು ಬೋಧಿಸಿದ್ದಾನೆ.

## ಅಪ್ಪನಾಜ್ಞೆಯ ಅಂಕುಶ

ದಶರಥನು ಬಹುದೀರ್ಘಕಾಲ ರಾಜ್ಯವಾಳಿ ಮಾನವ ಸ್ವಭಾವವನ್ನು ಚೆನ್ನಾಗಿ ತಿಳಿದುಕೊಂಡಿದ್ದ. ಸ್ತ್ರೀಬುದ್ಧಿ ಚಂಚಲವೆಂದೂ ರಾಜ್ಯಾಭಿಲಾಷೆ ತಿರಿದುಂಬುವವನನ್ನೂ ಪೀಡಿಸುತ್ತದೆ ಎಂದೂ ಅರಿತಿದ್ದ. ತನ್ನ ಅಂತಿಮ ಕಾಲದಲ್ಲಿ ಭರತನೇನಾದರೂ ಶ್ರೀರಾಮನಿಗೆ ಮೋಸಮಾಡಿ ಗದ್ದುಗೆಯನ್ನೇರಿದರೆ, ಅವನು ಹಾಕಿದ ಪಿಂಡ ನನಗೆ ಸೇರದಿರಲೆಂದಿದ್ದ. ರಾಜಪದವಿಯನ್ನು ಕನಸಿನಲ್ಲೂ ಬಯಸದ ಆ ಶುದ್ಧಾತ್ಮನು ಪಿತನ ಶವವನ್ನು ನೋಡಿ ವಿವಿಧ ರೀತಿಯಲ್ಲಿ ಗೋಳಾಡಿದ. ಪುರೋಹಿತರ ಮಾರ್ಗದರ್ಶನದಲ್ಲಿ ಎಲ್ಲವನ್ನೂ ಸಾಂಗವಾಗಿ ನೆರವೇರಿಸಿದ. ತಂದೆಗೆ ಹಾಕಿದ ಪಿಂಡ ಅವನಿಗೆ ಸಂದಿದೆಯೆಂದು ಅಂತರ್ವಾಣಿ ನುಡಿಯಿತು.

ಶ್ರೀರಾಮನಿಗೆ ನೋವುಂಟಾಗುವ ಯಾವ ಕಾರ್ಯವನ್ನೂ ಮಾಡಬಾರದು, ಮಾಡುವುದಿಲ್ಲವೆಂದು ನಿರ್ಧರಿಸಿ ತನ್ನಾತ್ಮವನ್ನು ಸಾಕ್ಷಿಯಾಗಿಟ್ಟುಕೊಂಡ ಭರತ ಮಹಾತ್ಮ

ಮಹಾಪಿತನ ಅಪರ ಕಾರ್ಯಗಳನ್ನೆಲ್ಲಾ ಮುಗಿಸಿಕೊಂಡು ಭರತನೂ ಶತ್ರುಘ್ನನೂ ಪರ್ಯಾಲೋಚನೆ ಮಾಡುತ್ತ ಅರಮನೆಗೆ ಬಂದರು. ಆ ಸಮಯದಲ್ಲಿ ತನ್ನ ಅಭೀಪ್ಸೆಯು ಈಡೇರಿತೆಂಬ ಹರ್ಷೋನ್ಮತ್ತತೆಯಿಂದ ಸರ್ವಾಲಂಕಾರ ಭೂಷಿತಳಾಗಿ ಬರುತ್ತಿದ್ದ ಮಂಥರೆ ಶತ್ರುಘ್ನನ ಕಣ್ಣಿಗೆ ಬಿದ್ದಳು. ಇಷ್ಟಕ್ಕೆಲ್ಲಾ ಅವಳೇ ಮೂಲವೆಂದು ತಿಳಿದಿದ್ದ ಅವನಿಗೆ ವಿಪರೀತ ಕೋಪ ಉಕ್ಕಿತು. ಅವಳ ಮಂಡೆಯನ್ನು ಹಿಡಿದು ಚೆನ್ನಾಗಿ ಜಗ್ಗಾಡಿದ. ಅಷ್ಟರಲ್ಲಿ ಸೇವಕಿಯ ಚೀರಾಟವನ್ನು ಕೇಳಿ ಅವಳ ರಕ್ಷಣೆಗೆ ಕೈಕೇಯಿ ಬಂದು ಮಹಾರಾಜನಾಗಲಿರುವ ಮಗನ ಮರೆಹೊಕ್ಕಳು. ಭರತನು ಕ್ರುದ್ಧನಾದ ತಮ್ಮನನ್ನು ಕಂಡು "ತಮ್ಮ ಶತ್ರುಘ್ನ, ಹೆಂಗಸರನ್ನು ಯಾರೂ ಕೊಲ್ಲ ಬಾರದು. ಅವಳನ್ನು ಕ್ಷಮಿಸಿ ಬಿಡು. ಇಲ್ಲದಿದ್ದರೆ ಪಾಪಿಯೂ ದುರಾ ಚಾರಳೂ ಆದ ಈ ಕೈಕೇಯಿಯನ್ನು ನಾನು ಮೊದಲೇ ಕೊಂದು ಹಾಕು ತ್ತಿದ್ದೆನು. ನಾನು ಮಾತೃಹತ್ಯೆ ಮಾಡಿದವನೆಂದು ತಿಳಿದು ಧಾರ್ಮಿಕನಾದ ಶ್ರೀರಾಮನು ನನ್ನ ಮೇಲೆ ಕೋಪಿಸಿಕೊಳ್ಳುವನೆಂದು ಸುಮ್ಮನಿದ್ದೇನೆ. ಈ ಗೂನಿಯನ್ನು ಕೊಂದರೆ, ಈ ವಿಷಯವು ಶ್ರೀರಾಮನಿಗೆ ಗೊತ್ತಾದರೆ ಆ ಧರ್ಮಾತ್ಮನು ನಮ್ಮಿಬ್ಬರೊಡನೆ ಮುಖವನ್ನು ಕೊಟ್ಟು ಮಾತನ್ನೇ ಆಡುವು ದಿಲ್ಲ. ಇದು ನಿಶ್ಚಯ" ಎಂದು ಹೇಳಿದನು (ಅಯೋ. ಸ. ೭೮. ಶ್ಲೋ. ೨೧-೨೪). ತ್ರಿಕರಣ ಶುದ್ಧಿಯಿಂದ ರಾಮಸೇವೆ ಮಾಡಲು ಆತಂಕವಾಗಿ ಶಪಥ ಮಾಡಿದ. ಅದರ ಪರೀಕ್ಷೆಯ ಸಮಯ ಬಂತು.

ರಾಜತಂತ್ರವೊಡ್ಡಿದ ಮಾಯೆಯ ಮೂಗು ಮುರಿದ

ಪಿತೃಕರ್ಮಗಳು ಮುಗಿದ ಮೇಲೆ ಸಚಿವರು ಭರತನನ್ನು ಭೇಟಿಮಾಡಿ ಮಹಾ ಪ್ರಲೋಭನವನ್ನೊಡ್ಡಿದರು. "ರಾಜನಿಲ್ಲದ ಮೇಲೆ ರಾಜ್ಯದಲ್ಲಿ

ಕ್ಷೋಭೆ ತಾಂಡವವಾಡುತ್ತದೆ. ನ್ಯಾಯವಾಗಿ ಇದರಲ್ಲಿ ನಿನ್ನ ಅಪರಾಧ ವೇನೂ ಇಲ್ಲ. ಸರ್ವಸಿದ್ಧತೆಯನ್ನು ಮಾಡಿ ನಿನ್ನೊಪ್ಪಿಗೆಯನ್ನು ಯಾಚಿಸು ತ್ತಿದ್ದೇವೆ'' ಎಂದರು. ಆಗ ಹೊರಟುಬಂದು ಸಿದ್ಧಪಡಿಸಿದ್ದ ಅಭಿಷೇಕ ಸಾಮಗ್ರಿಗಳಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿದನು, ಅಲ್ಲಿ ನೆರೆದಿದ್ದವರಿಗೆ ''ನಮ್ಮ ವಂಶದಲ್ಲಿ ಜ್ಯೇಷ್ಠಪುತ್ರನಿಗೆ ರಾಜ ಪದವಿಯು ತಪ್ಪದೆ ನಡೆದು ಕೊಂಡು ಬಂದಿದೆ. ನೀವು ಇದನ್ನು ತಿಳಿದು ನನಗೆ ಈ ರೀತಿ ಹೇಳು ವುದು ಸರಿಯಲ್ಲ. ಅವನೇ ರಾಜನಾಗಬೇಕು. ಅವನಿಗೆ ಬದಲಾಗಿ ನಾನೇ ಹದಿನಾಲ್ಕುವರ್ಷ ವನವಾಸ ಮಾಡುವೆನು. ವನದಲ್ಲಿಯೇ ಶ್ರೀರಾಮನ ಪಟ್ಟಾಭಿಷೇಕವನ್ನು ನೆರವೇರಿಸಿ ಅವನನ್ನು ಕರೆದುಕೊಂಡು ಬರುವೆನು. ಚತುರಂಗಬಲವೂ ಸಿದ್ಧವಾಗಲಿ'' ಎಂದ. ನೆರೆದವರಲ್ಲಿ ಅತ್ಯಾಶ್ಚರ್ಯ ಭುಗಿಲೆಂದಿತು. ಪಟ್ಟಾಭಿಷೇಕದ ಉಪಕರಣಗಳನ್ನೆಲ್ಲಾ ವನಕ್ಕೆ ಸಾಗಿಸಿ ಕೊಂಡು ಹೋಗಬೇಕೆಂದ.

ಇತ್ತಲಾಗಿ ಕುಲ ಪುರೋಹಿತರೂ ಗುರುಗಳೂ ಆದ ವಸಿಷ್ಠರು ರಾಜ ಸಭೆಯನ್ನು ಕರೆದು ಪಟ್ಟಾಭಿಷೇಕದ ಸನ್ನಾಹಮಾಡಿದರು. ಭರತನು ರಾಜ ಸಭೆಗೆ ಬಂದನು. ಆಗ ವಸಿಷ್ಠರು ವಿಹಂಗದೃಷ್ಟಿಯಿಂದ ಸಭೆಯನ್ನು ನೋಡಿ ಮೃದುವಾಗಿ ಭರತನಿಗೆ ಹೀಗೆಂದರು: ''ನಿನ್ನ ತಂದೆಯೂ ಅಣ್ಣನೂ ನಿಷ್ಕಂಟಕವಾಗಿ ರಾಜ್ಯವನ್ನು ನಿನಗೆ ಬಿಟ್ಟುಕೊಟ್ಟಿದ್ದಾರೆ. ಆದ್ದರಿಂದ ಈ ರಾಜ್ಯವನ್ನು ಪಾಲಿಸು''. ಅತಿ ಗಂಭೀರವಾದ ಪ್ರಲೋಭನ. ಎಂಥ ಕೆಚ್ಚೆದೆಯನ್ನು ಮೂಟೆಕಟ್ಟಿ ಬಿಸಾಕುವಂಥದ್ದು. ಭರತ ದುಃಖದಲ್ಲಿ ಮುಳುಗಿದ. ಎಚ್ಚೆತ್ತ. ಮನಸ್ಸಿನಲ್ಲಿ ಶ್ರೀರಾಮನನ್ನು ಸ್ಮರಿಸಿಕೊಂಡನು. ಇಂಪಾದ ಸ್ವರದಲ್ಲಿ ಕುಲಪುರೋಹಿತರನ್ನು ಆಕ್ಷೇಪಿಸಿದನು. ''ಸಕಲ ಸದ್ಗುಣ ಸಂಪನ್ನನೂ ಜ್ಯೇಷ್ಠನೂ ಆದ ಶ್ರೀರಾಮನ ರಾಜ್ಯವನ್ನು ನನ್ನಂಥವನು ಅಪಹರಿಸಬಹುದೆ? ದಶರಥನಿಗೆ ಮಗನಾಗಿ ಹುಟ್ಟಿದವನು ಇನ್ನೊಬ್ಬರ ಸ್ವತ್ತನ್ನು ಅಪಹರಿಸಿಯಾನೆ? ನೀವು ನನಗೆ ಧರ್ಮ ಮಾರ್ಗವನ್ನು ಉಪದೇಶಿಸಬೇಕಲ್ಲದೆ ಇಂಥ ಮಾತನ್ನು ಹೇಳುವುದು ತರವಲ್ಲ. ನಾನು ರಾಜನಾಗುವುದು ಪಾಪಕರ. ಅಧೋಗತಿಗೆ ತಳ್ಳುವ ಕಾರ್ಯವಿದು. ನಾನು ಕುಲಗೇಡಿಯಾಗಲೊಲ್ಲೆ. ನನ್ನ ತಾಯಿ ಮಾಡಿದ ಪಾಪವನ್ನು ನಾನು

ಅನುಮೋದಿಸುವುದಿಲ್ಲ. ಕಾಡಿನಲ್ಲಿರುವ ಆ ಮಹಾತ್ಮನಿಗೆ ಇಲ್ಲಿಂದಲೇ ಕೈ ಮುಗಿಯುತ್ತಿದ್ದೇನೆ. ಶ್ರೀರಾಮನೇ ರಾಜ. ಅವನನ್ನು ಹಿಂದಿರುಗಿಸುವೆನು, ಸಾಧ್ಯವಾಗದೆ ಹೋದರೆ ನಾನೂ ಆರ್ಯನಾದ ಲಕ್ಷ್ಮಣನಂತೆ ಕಾಡಿನಲ್ಲಿಯೇ ವಾಸಮಾಡುವೆನು". ರಾಜ ಪುರೋಹಿತರಿಗೆ ತೇಜೋವಧೆಯಾದಂತೆ ಕಂಡು ಬಂದರೂ ವಸಿಷ್ಠರಿಗೆ ಆನಂದವಾಗಿರಬೇಕು ? ಭರತನು ಸುಮಂತ್ರನನ್ನು ಕರೆದು ಸೇನೆಯ ಪ್ರಯಾಣಕ್ಕೆ ಆಜ್ಞೆಯನ್ನು ನೀಡು ಎಂದ. ಪಡೆಯ ಪ್ರಯಾಣಕ್ಕೆ ಏನೇನು ಬೇಕೊ ಅದನ್ನೆಲ್ಲಾ ಮಾಡಿ ಮುಗಿಸು ಎಂದು ಶತ್ರುಘ್ನನಿಗೆ ಹೇಳಿದ. ಭರತನ ಈ ನಿರ್ಧಾರದಿಂದ ಅಯೋಧ್ಯೆಗೆ ಅಯೋಧ್ಯೆಯೇ ಆನಂದಾಂಬುಧಿಯಲ್ಲಿ ಮುಳುಗಿಹೋಯಿತು. ಈ ಆನಂದಾಭಿ ವ್ಯಕ್ತಿಯನ್ನು ನಿರೂಪಿಸುವುದರಲ್ಲಿ ಕವಿ ಎಂಥ ಕಲಾಕೌಶಲವನ್ನು ಪ್ರದರ್ಶಿಸಿದ್ದಾನೆ ! ! ಯೋಧರ ಹೆಂಡತಿಯರಿಗೆ ಈ ವಿಷಯವು ತಿಳಿಯಿತು. ಅವರು ಹರ್ಷಗೊಂಡು ಮನೆ ಮನೆಯಲ್ಲಿಯೂ ತಮ್ಮ ಗಂಡಂದಿರನ್ನು ಬೇಗನೆ ಪ್ರಯಾಣ ಮಾಡುವಂತೆ ತ್ವರೆ ಪಡಿಸಲಾರಂಭಿಸಿದರು (ಅಯೋ. ಸ. ೮೨. ಶ್ಲೋ. ೨೫).

ಚತುರ್ವರ್ಣದವರು ಸರ್ವರೂ ಗಂಗಾನದಿಯತ್ತ ಪ್ರಯಾಣ ಬೆಳೆಸಿದರು. ಕೈಕೇಯಿಯೂ ಸಂತೋಷದಿಂದ ಹೊರಟಳು. ಹಾಗೆಯೇ ಸುಮಿತ್ರೆಯೂ ಕೌಸಲ್ಯೆಯೂ ಶ್ರೀರಾಮನನ್ನು ಕರೆತರುವ ಸಂಭ್ರಮದಿಂದ ಉತ್ತಮ ವಾಹನಗಳನ್ನೇರಿ ಪ್ರಯಾಣ ಮಾಡಿದರು. ಎಲ್ಲರ ಬಾಯಿಯಲ್ಲೂ ಶ್ರೀರಾಮನನ್ನು ಯಾವಾಗ ನೋಡುವೆವೋ ಎಂಬ ಕಾತರದ ನುಡಿಗಳೇ ! ! ಗಂಗಾತೀರವನ್ನು ಮುಟ್ಟಿದರು. ಬೀಡಾರ ಹೂಡಲು ಆಜ್ಞೆಯನ್ನಿತ್ತ. ಮುಖ್ಯ ಕಾರಣ ತರ್ಪಣವನ್ನು ಕೊಡಬೇಕೆಂಬುದು. ಮಹಾತ್ಮನಾದ ಶ್ರೀರಾಮನನ್ನು ಕರೆತರುವ ಬಗೆ ಯಾವುದು ಎಂದು ಭರತನು ಚಿಂತಿಸುತ್ತಲೇ ಇದ್ದ.

## ಗುಹನ ದರ್ಶನವೊ ಭರತನ ಹೃದ್ಗುಹೆಯ ದರ್ಶನವೊ ?

ಅಯೋಧ್ಯಾಸೇನೆ ಗಂಗಾ ದಡದಲ್ಲಿ ಬೀಡುಬಿಟ್ಟಿರುವುದು ದಶರಥನ ಮತ್ತು ಶ್ರೀರಾಮನ ಪರಮ ಮಿತ್ರನಾದ ನಿಷಾದ ಪ್ರಭು ಗುಹನಿಗೆ ಗೊತ್ತಾ

ಯಿತು. ಅವನು ಕೂಡಲೆ ಸೇನಾ ಸನ್ನಾಹ ಮಾಡಿದ. ಭರತನು ಶ್ರೀರಾಮನನ್ನು ನಿರ್ಮೂಲ ಮಾಡಲು ಹೊರಟಿದ್ದಾನೆಂದು ಭಾವಿಸಿದ್ದ. ಅಷ್ಟರಲ್ಲೇ ಸುಮಂತ್ರನು ಗುಹನ ವಿಚಾರವನ್ನು ತಿಳಿಸಿ ಅವನು ಬಂದಿರುವುದನ್ನೂ ಸೂಚಿಸಿದ. ಅವನಿಗೆ ದಂಡಕಾರಣ್ಯದ ವಿಷಯವೆಲ್ಲವೂ ಗೊತ್ತಿದೆ, ಅಷ್ಟೇ ಅಲ್ಲ ಶ್ರೀರಾಮನಿರುವ ಸ್ಥಳವೂ ಗೊತ್ತಿದೆ ಎಂದನು. ಅಂಥವನಿಗೆ ದರ್ಶನ ಕೊಡಬೇಕೆಂದು ಅರುಹಿದ. ಗುಹನು ಬಂದು ನೋಡಲಿ ಎಂದು ಭರತ ಅಪ್ಪಣೆ ಕೊಟ್ಟ. ಗುಹನು ಬಂದು "ಈ ದೇಶವು ನಿನ್ನ ಅರಮನೆಯ ಹೂದೋಟ. ನಮ್ಮ ಸತ್ಕಾರವನ್ನು ಸ್ವೀಕರಿಸಿ ನಾಳೆ ಸೇನಾಸಮೇತನಾಗಿ ಪ್ರಯಾಣ ಬೆಳೆಸಬಹುದು" ಎಂದ. "ಗುಹ, ನಾನು ಭರದ್ವಾಜಾಶ್ರಮಕ್ಕೆ ಹೋಗಬೇಕು; ದಾರಿ ತೋರಿಸು" ಎಂದು ಕೇಳಿದಾಗ ಗುಹನು "ತೋರಿಸುತ್ತೇನೆ, ನಾನೂ ಬರುತ್ತೇನೆ. ಆದರೆ ಪುಣ್ಯಾತ್ಮನಾದ ಶ್ರೀರಾಮನ ಬಳಿಗೆ ನೀನು ದುರ್ಭಾವನೆಯಿಂದ ಹೋಗುತ್ತಿಲ್ಲವಷ್ಟೆ? ನಿನ್ನ ಈ ಮಹಾ ಸೇನೆಯನ್ನು ನೋಡಿದರೆ ನನಗೆ ಸ್ವಲ್ಪ ಸಂದೇಹವಾಗುತ್ತದೆ" ಎಂದು ಹೇಳಿದನು. "ಗುಹ, ನನ್ನ ವಿಷಯದಲ್ಲಿ ಸಂದೇಹಪಡುವಂಥ ಕಾಲ ಎಂದಿಗೂ ಬರದಿರಲಿ. ನೀನು ಅನ್ಯಥಾ ಭಾವಿಸಬೇಡ. ತಂದೆಗೆ ಸಮಾನನಾದ ಅಣ್ಣನನ್ನು ಕರೆದುಕೊಂಡು ಬರಲು ಹೋಗುತ್ತಿದ್ದೇನೆ" ಎಂದ. ಹರ್ಷಚಿತ್ತನಾದ ಗುಹನು "ಈ ಜಗತ್ತಿನಲ್ಲಿ ನಿನಗೆ ಸಮಾನರಾದವರಿಲ್ಲ. ತಾನಾಗಿ ಕೈಗೆ ಬಂದ ರಾಜ್ಯವನ್ನು ಬಿಟ್ಟುಕೊಡಲು ಸಿದ್ಧನಾಗಿರುವೆಯಲ್ಲ. ನಿನ್ನ ಕೀರ್ತಿಯು ಶಾಶ್ವತವಾಗಿ ಲೋಕದಲ್ಲಿ ನಿಲ್ಲುವುದು. ಕಷ್ಟದಲ್ಲಿ ಸಿಕ್ಕಿರುವ ಶ್ರೀರಾಮನನ್ನು ಕರೆತರಲು ಸಂಕಲ್ಪಿಸಿದ್ದೀಯೆ" ಎಂದು ನುಡಿದನು (ಅಯೋ. ಸ. ೮೫).

ಆತಿಥ್ಯವನ್ನು ಸ್ವೀಕರಿಸಿದ ಮೇಲೆ ಗುಹನ ಸಂಗಡ ಶ್ರೀರಾಮನ ವಿಚಾರವನ್ನೇ ಮಾತಾಡ ತೊಡಗಿದನು. ಭರತನ ಶೋಕಾಗ್ನಿಯು ಉರಿಯುತ್ತಿದ್ದುದು ಗುಹನ ಕಣ್ಣಿಗೆ ಕಾಣುತ್ತಿತ್ತು. ಸಮಾಧಾನ ಪಡಿಸಿದ. ಲಕ್ಷ್ಮಣನೂ ನಿನ್ನಂತೆಯೇ ಶೋಕಾಗ್ನಿಯೊಳಗೆ ಬೇಯುತ್ತಾ, ಆತಿಥ್ಯವನ್ನೂ ಸ್ವೀಕರಿಸದೆ, ರಾತ್ರಿಯೆಲ್ಲಾ ನಿದ್ದೆ ಮಾಡದೆ ಅಣ್ಣನ ಕಾವಲಿಗಿದ್ದ. ಶ್ರೀರಾಮನ ವಿರಹದಿಂದ ಕೌಸಲ್ಯೆಯೂ ದಶರಥನೂ ಪಂಚತ್ವವನ್ನೈದುವುದು ಖಚಿತವೆಂದು ಬಹುವಾಗಿ ಗೋಳಾಡಿದ ಎಂದನು. ಆ ಮೇಲೆ ಅವರು ಜಟಾಜೂಟಧಾರಿ

ಗಳಾಗಿ ಗಂಗೆಯನ್ನು ತನ್ನ ದೋಣಿಗಳಿಂದ ಸಾಗಿ ಭರದ್ವಾಜಾಶ್ರಮದತ್ತ ಹೋದರೆಂದ.

ಭರತ ಮೂರ್ಛೆಯಿಂದ ಎಚ್ಚೆತ್ತು, ಆ ತ್ರಿಮೂರ್ತಿಗಳು ಎಲ್ಲಿ ತಂಗಿದ್ದರು, ನಿದ್ರಿಸಿದರು, ಏನೇನು ಮಾಡಿದರು ಎಂಬುದೆಲ್ಲವನ್ನೂ ಹೇಳೆಂದ. ಗುಹನು ಹೇಳುತ್ತಿದ್ದಂತೆಯೇ "ಜನನಿಯರೇ, ನೋಡಿ, ನೋಡಿ, ಕೇಳಿ, ಕೇಳಿ, ತ್ರಿಲೋಕವೀರನಾದ ರಾಘವನು, ಆ ಮಹಾತಾಯಿ ಸೀತೆಯು ರಾಜಭೋಗವನ್ನು ತ್ಯಜಿಸಿ, ಗುಹನ ಆತಿಥ್ಯವನ್ನೂ ಸ್ವೀಕರಿಸದೆ, ಜಟಾಜೂಟಧಾರಿಗಳಾಗಿ ಇಲ್ಲಿಂದ ಪ್ರಯಾಣ ಬೆಳೆಸಿದ್ದಾರೆ. ಗಂಗಾ ಜಲವನ್ನು ಪಾನ ಮಾಡಿ ರಾತ್ರಿ ಕಳೆದರಂತೆ" ಎಂದು ಹೇಳುತ್ತಾ ಮತ್ತೆ ಮೂರ್ಛೆಗೆ ಸಂದ. ಕೌಸಲ್ಯೆಯು ಅವನನ್ನು ತನ್ನಂಕದಲ್ಲಿ ಮಲಗಿಸಿಕೊಂಡು ಶೈತ್ಯೋಪಚಾರ ಮಾಗಿದಳು. ಚೇತನಗೊಂಡು "ನಾನೂ ತಾಪಸ ವೇಷವನ್ನು ಧರಿಸುತ್ತೇನೆ. ನೆಲದ ಮೇಲೆ ಮಲಗಿ ಗೆಡ್ಡೆ ಗೆಣಸು ತಿನ್ನುತ್ತೇನೆ. ನಾನೂ ಹದಿನಾಲ್ಕು ವರ್ಷ ವನವಾಸ ಮಾಡುತ್ತೇನೆ. ಅವನು ಹಿಂದಿರುಗದಿದ್ದರೆ ನಾನೂ ಅವನ ಜತೆಯಲ್ಲಿ ವನೇಚರನಾಗಿದ್ದು ಬಿಡುತ್ತೇನೆ. ಶತ್ರುಘ್ನ ನನ್ನನ್ನು ಹಿಂಬಾಲಿಸುವನು" ಎನ್ನುತ್ತಾ ಕಡುಶೋಕದಲ್ಲಿ ಮುಳುಗಿದನು. ಗುಹನ ಸಹಾಯದಿಂದ ಗಂಗೆಯನ್ನು ದಾಟಿ ಭರದ್ವಾಜಾಶ್ರಮದತ್ತ ನಡೆದನು.

## ಇಂದ್ರಭೋಗದ ಪ್ರಲೋಭನೆ

ವಸಿಷ್ಠರನ್ನೂ ಮಂತ್ರಿಗಳನ್ನೂ ಮುಂದಿಟ್ಟುಕೊಂಡು, ಸೇನೆಯನ್ನು ದೂರದಲ್ಲಿ ಹಿಂದೆ ಬಿಟ್ಟು, ನಡೆದುಹೋಗಿ ಭರದ್ವಾಜರ ದರ್ಶನ ಮಾಡಿದನು. ಉಭಯತ್ರರ ನಡುವೆ ಕುಶಲ ಪ್ರಶ್ನೋತ್ತರಗಳಾದುವು. ಆತಿಥ್ಯವನ್ನು ಸ್ವೀಕರಿಸಿದ. "ಭರತ, ರಾಜ್ಯವನ್ನು ಆಳುತ್ತಿರಬೇಕಾದ ನೀನು ಇಲ್ಲಿಗೆ ಬಂದ ಉದ್ದೇಶವೇನು? ಎಲ್ಲವನ್ನೂ ಸ್ಪಷ್ಟವಾಗಿ ತಿಳಿಸು. ನನ್ನ ಮನಸ್ಸಿನ ಶಂಕೆ ಹೋಗಲಿಲ್ಲ. ತಂದೆಯೇ ಒಬ್ಬ ಹೆಂಗಸಿನ ಪ್ರಚೋದನೆಗೆ ಒಳಗಾಗಿ ಹದಿನಾಲ್ಕು ವರ್ಷಗಳ ಕಾಲ ವನವಾಸಿಯಾಗಿರು ಎಂದು ಆ ಕೀರ್ತಿಶಾಲಿಗೆ ಆಜ್ಞೆ ಮಾಡಿದನಲ್ಲವೆ? ನಿರಪರಾಧಿಗಳಾದ ರಾಮಲಕ್ಷ್ಮಣರಿಗೆ ನೀನು ಕೇಡನ್ನೆಣಿಸುತ್ತಿಲ್ಲವಷ್ಟೆ? ರಾಜ್ಯವನ್ನು ನಿಷ್ಕಂಟಕವಾಗಿ ಅನುಭವಿಸಬೇಕೆಂದು

ಉದ್ದೇಶಿಸಿರುವೆಯೋ ಹೇಗೆ ?'' ಎಂದು ಭರದ್ವಾಜರು ಕೇಳಿದರು. ತ್ರಿಕಾಲ ದರ್ಶಿಗಳಾದ ನೀವೂ ಶಂಕಿಸುವಂತಾಯಿತೆ ಎಂದು ಕಂಬನಿದುಂಬಿ ಗದ್ಗದ ಕಂಠದಿಂದ ಉಸುರಿದನು. "ನಾನು ಕೆಟ್ಟೆ. ನನ್ನಲ್ಲಿ ಯಾವ ತಪ್ಪೂ ಇಲ್ಲ. ತಾವು ಹೀಗೆ ಅಪ್ಪಣೆ ಕೊಡಿಸಬಾರದು. ತಾಯಿ ನನಗೋಸ್ಕರವೆಸಗಿದ ಕೃತ್ಯಕ್ಕೆ ನಾನೆಂದೂ ಭಾಗಿಯಲ್ಲ. ಈ ದೇಶಕ್ಕೆ ರಾಜನಾದ ಶ್ರೀರಾಮ ನೆಲ್ಲಿರುವನೆಂಬುದನ್ನು ತಿಳಿಸಿ ಕೃಪಾದೃಷ್ಟಿಯಿಂದ ನೋಡಿ'' ಎಂದು ಬೇಡಿದನು. "ವತ್ಸ, ನಿನ್ನ ಮನಸ್ಸಿನಲ್ಲಿರುವುದನ್ನು ನಾನು ಬಲ್ಲೆ. ಆದರೂ ಅದನ್ನು ದೃಢಪಡಿಸುವುದಕ್ಕಾಗಿ ಹೀಗೆ ಕೇಳಿದೆನು. ನಿನ್ನ ಕೀರ್ತಿಯು ಪ್ರಚುರವಾಗಲೆಂದು ಈ ಪ್ರಶ್ನೆಯನ್ನು ಹಾಕಿದೆನು. ನೀನು ಪ್ರಾಜ್ಞ. ಈ ದಿನ ಮಂತ್ರಿಗಳೊಡನೆ ಇಲ್ಲಿಯೇ ಇರು. ನಾಳೆ ಚಿತ್ರಕೂಟಕ್ಕೆ ಹೋಗುವೆ'' ಎಂದರು. ಭರತನ ಔದಾರ್ಯವೂ ಸರಳ ಸ್ವಭಾವವೂ ಭರದ್ವಾಜರಿಗೆ ಸ್ಪಷ್ಟವಾಯಿತು. ಭರತನೂ ಆ ರಾತ್ರಿ ಅಲ್ಲಿ ಬೀಡಾರ ಹೂಡಲು ನಿಶ್ಚಯಿಸಿದನು.

ಭರದ್ವಾಜರು ಇಂದ್ರ ವೈಭವವನ್ನು ಸೃಷ್ಟಿಸಿದರು. ಪ್ರಮುಖರಿಗೇ ಅಲ್ಲ ; ಸಕಲ ಸೈನ್ಯ ಮತ್ತು ಅದರ ಪರಿವಾರಕ್ಕೆ. ಮರ್ತ್ಯಲೋಕದಲ್ಲೇ ಎಂದೂ ಎಲ್ಲೂ ಕಾಣದಂತಹ ಕೇಳದಂತಹ ಆತಿಥ್ಯ. ರತ್ನಸಿಂಹಾಸನಾದಿ ಪೀಠೋಪಕರಣಗಳ ಸಮೇತ ನಿಜವಾಗಿ ರಾಜಸನ್ಮಾನ ಎನಿಸುವಂತೆ ವ್ಯವಸ್ಥೆ ಮಾಡಿದ್ದರು, ತಮ್ಮ ತಪೋಶಕ್ತಿಯಿಂದ. ಭರತನಿಗೆ ಅರಿವಾಯಿತು ತಪೋ ಮಹಿಮೆ. ಸಿದ್ಧಪಡಿಸಿದ್ದ ಸಿಂಹಾಸನವನ್ನೇರದೆ ಅದಕ್ಕೆ ಬಲವಂದು ಅದು ಶ್ರೀರಾಮನಿಗೆ ಸಲ್ಲತಕ್ಕದ್ದೆಂದು ಹೇಳಿ ಸಾಮಾನ್ಯ ಪೀಠದಲ್ಲಿ ಕುಳಿತನು. ಸೈನಿಕರು ಸಿಹಿಯನ್ನುಂಡು ಅಯೋಧ್ಯೆಯನ್ನೂ ತಮ್ಮ ಬಳಿಯಿರುವ ಭರತನನ್ನೂ ಮರೆತು ಕುಣಿದಾಡಿದರು. ಭರತನನ್ನೂ ತಿರಸ್ಕರಿಸಿ ಎದುರು ಬೀಳುವ ಮಟ್ಟಕ್ಕೂ ಹೋಗಿದ್ದರು. ಮಹರ್ಷಿಗಳು ಭರತನೊಬ್ಬನನ್ನೇ ಪರೀಕ್ಷೆಗೀಡು ಮಾಡಲಿಲ್ಲ ; ಅಯೋಧ್ಯಾ ಸೇನೆಯನ್ನೂ ಕೂಡ. ಭರತನು ಆ ರಾತ್ರಿಯನ್ನು ಅಲ್ಲಿಯೇ ಕಳೆದನು. ಮದ್ಯಾದಿ ಸೇವನೆಯಿಂದ ಮತ್ತರಾಗಿದ್ದ ಅವನ ಪರಿವಾರವೂ ಎಚ್ಚರಗೊಂಡಿತು. ಮಹರ್ಷಿಗಳಿಗೆ ದೀರ್ಘದಂಡ ನಮಸ್ಕಾರ ಮಾಡಿ "ಮಹರ್ಷಿಗಳೆ, ನನ್ನನ್ನು ಸ್ನೇಹಪೂರ್ಣ ದೃಷ್ಟಿಯಿಂದ ನೋಡೋಣ

ವಾಗಲಿ. ಮಹಾತ್ಮ ಶ್ರೀರಾಮನ ನೆಲೆಯನ್ನು ತಿಳಿಸಿ " ಎಂದು ಬೇಡಿದನು. ಆಗ ಅವರು ಚಿತ್ರಕೂಟಕ್ಕೆ ಹೋಗುವ ದಾರಿಯನ್ನು ತೋರಿಸಿದರು. ಅದರಂತೆ ಸೇನಾಸಮೇತ ಹೊರಡಲು ಸಜ್ಜಾದ.

ಮುಂದಿನ ಪ್ರಯಾಣಕ್ಕೆ ಸಿದ್ಧನಾಗಿರುವುದನ್ನು ತಿಳಿದು ಅವನ ತ್ರಿಮಾತೆಯರು ಭರದ್ವಾಜರ ಆಶೀರ್ವಾದವನ್ನು ಪಡೆಯಲು ಸುತ್ತುವರಿದರು. ದೈನ್ಯದಿಂದ ಕೃಶಳಾಗಿ ನಡುಗುತ್ತಿದ್ದ ಕೌಸಲ್ಯೆಯು ಸುಮಿತ್ರಾದೇವಿಯ ಸಹಾಯದಿಂದ ಮುಂದೆ ಬಂದು, ಆ ಮುನಿಗಳ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು. ಕೈಕೇಯಿಯು ನಾಚಿಕೆಯಿಂದ ಸಂಕೋಚಿಸುತ್ತ ಮುಂದೆ ಬಂದಳು. ತನ್ನ ಇಷ್ಟಾರ್ಥವೂ ಕೈಗೂಡದೆ ಸಮಸ್ತರ ನಿಂದೆಗೂ ಅವಳು ಗುರಿಯಾಗಿದ್ದಳು. ಅವಳು ಆ ಮಹರ್ಷಿಗಳಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಭರತನ ಸಮೀಪಕ್ಕೆ ಹೋಗಿ ದೈನ್ಯದಿಂದ ನಿಂತುಕೊಂಡಳು. ಆಗ ಭರದ್ವಾಜ ಮುನಿಗಳು ಭರತನನ್ನು ಕುರಿತು "ರಾಘವ, ನಿನ್ನ ಮಾತೆಯರಲ್ಲಿ ಯಾರು ಯಾರೆಂಬ ವಿಶೇಷವನ್ನು ತಿಳಿಯಲಿಚ್ಛಿಸುತ್ತೇನೆ" ಎಂದರು. ಆಗ ಭರತ "ಭಗವನ್ ವ್ರತೋಪವಾಸದಿಂದ ಕೃಶಳಾಗಿ ದೀನೆಯಾಗಿ ದೇವತೆಯಂತೆ ವಿರಾಜಿಸುವವಳೂ ಶ್ರೀರಾಮನಿಗೆ ಜನ್ಮವನ್ನಿತ್ತವಳೂ ಆದ ಕೌಸಲ್ಯಾ ತಾಯಿ ಇವಳು. ಅಶ್ವಿನೀ ದೇವತೆಗಳಂತೆ ರೂಪ ಸಂಪನ್ನರೂ ವೀರರೂ ಸತ್ಯಸಂಧರೂ ಆದ ಲಕ್ಷ್ಮಣ ಶತ್ರುಘ್ನರಿಬ್ಬರಿಗೂ ಜನ್ಮದಾತೆಯಾಗಿ ದೈನ್ಯದಿಂದ ನಿಂತಿರುವವಳೇ ಮಹಾರಾಜನ ಮಧ್ಯ ಪತ್ನಿ; ಶ್ರೀರಾಮನನ್ನು ಪ್ರಾಣಾಂತಿಕವಾದ ಕಷ್ಟಕ್ಕೆ ಸಿಕ್ಕಿಸಿ ದಂಡಕಾರಣ್ಯಕ್ಕೆ ಕಳಿಸಿದವಳೂ, ಪತಿಯನ್ನು ಸ್ವರ್ಗಸ್ಥನನ್ನಾಗಿ ಮಾಡಿದವಳೂ ಸಿಡುಕಿಯೂ ಅವಿವೇಕಿಯೂ ದುರಹಂಕಾರಿಯೂ ದುರಾಶಾಗ್ರಸ್ತಳೂ, ದುಷ್ಟಳೂ, ಆಷಾಢಭೂತಿಯೂ. ಕಠೋರ ಹೃದಯಿಯೂ ಪಾಪಿಯೂ ಆದ ಇವಳು ನನ್ನ ತಾಯಿ" ಎಂದನು. ಆಗ ಅವನಿಗೆ ಕಣ್ಣಲ್ಲಿ ನೀರು ಹರಿಯುತ್ತಿತ್ತು. ಕಣ್ಣುಗಳೂ ಕೆಂಪಾಗಿದ್ದವು. ಕೆರಳಿದ ಸರ್ಪದಂತೆ ಬುಸುಗುಟ್ಟುತ್ತಿದ್ದ. ಅದನ್ನು ಭಾರದ್ವಾಜರು ನೋಡಿ ಹೀಗೆಂದರು. "ಭರತ, ಕೈಕೇಯಿಯ ವಿಷಯದಲ್ಲಿ ದೋಷವನ್ನೆಣಿಸಬೇಡ. ರಾಮನನ್ನು ವನಕ್ಕೆ ಕಳಿಸಿದ್ದು ಪರಿಣಾಮದಲ್ಲಿ ಜನರಿಗೆ ಸೌಖ್ಯವನ್ನು ತರುತ್ತದೆ. ರಾಮನ ವನವಾಸದಿಂದ ದೇವದಾನವರಿಗೂ ಆತ್ಮನಿಷ್ಠರಾದ ಋಷಿಗಳಿಗೂ ಹಿತವೇ

ಆಗುತ್ತದೆ" ಎಂದು ನುಡಿದರು (ಅಯೋ. ಸ. ೯೨. ಶ್ಲೋ. ೨೯-೩೦). ಕಾವ್ಯದ ಸೂತ್ರ ವಾಕ್ಯಗಳಲ್ಲಿ ಮಹತ್ತಾದ ವಾಕ್ಯವಿದು. ಆಗ ಕೈಕೇಯಿಗೆ ಆತ್ಮ ವಿಶ್ವಾಸವು ಮತ್ತೆ ಮೂಡಿರಬೇಕು!! ವಿಚಾರವಾದಿಯಾಗಿದ್ದರೆ ಭರತನು ಪೂರ್ವಾಪರ ಆಲೋಚನೆ ಮಾಡಲು ಮಹಾವಸ್ತು, ಕ್ಷೇತ್ರ ಸಿಕ್ಕಿತ್ತು. ಮಹರ್ಷಿಗಳ ಆಶೀರ್ವಾದವನ್ನು ಪಡೆದು ಅವರು ತೋರಿದ ದಾರಿಯನ್ನು ಕ್ರಮಿಸಲು ಪ್ರಾರಂಭಿಸಿದ. ರಾಮ-ಚಿತ್ರಕೂಟ; ಚಿತ್ರಕೂಟ-ರಾಮ-ಇವೇ ಅವನ ಮನದಲ್ಲಿ ಮನೆಮಾಡಿಬಿಟ್ಟಿದ್ದುವು.

### ಸೋದರ ಸ್ನೇಹದ ಸುಧಾಸಾಗರ

ಭರತ ರಾಮಾಶ್ರಮದ ಚಿತ್ರಕೂಟವನ್ನು ಸಮೀಪಿಸಿದ. ರಾಮದರ್ಶನವಾಗುವುದೆಂದು ಆನಂದ. ಮನೋಹರವಾದ ಪ್ರಕೃತಿ ಸೌಂದರ್ಯದಿಂದ ಅದು ಮತ್ತಷ್ಟು ವೃದ್ಧಿಯಾಯಿತು. ಧರ್ಮಾತ್ಮನಾದ ಭರತನು ಗಾಬರಿಯಿಂದ ಓಡಾಡುತ್ತಿದ್ದ ವನ್ಯ ಮೃಗಗಳನ್ನು ನೋಡಿ ವಿನೋದಿಸುತ್ತ, ಕೋಲಾಹಲಗೈಯುತ್ತಿದ್ದ ಚತುರಂಗ ಸೇನೆಯೊಡನೆ ಪ್ರಯಾಣ ಮಾಡಿದನು. '...ಈ ಮರಗಳು ಮೇಲ್ಭಾಗದಲ್ಲಿ ಮೋಡದಂತೆ ಕಪ್ಪಾದ ಕೊಂಬೆಗಳ ಜಾಲದಲ್ಲಿ ಹೂವಿನ ಗೊಂಚಲುಗಳನ್ನು ಧರಿಸಿವೆ. ಇವುಗಳನ್ನು ನೋಡಿದರೆ ದಕ್ಷಿಣದೇಶದ ಜನರು ಶಿರಸ್ಸಿನಲ್ಲಿ ಹೂಗಳನ್ನು ಮುಡಿದುಕೊಂಡಂತೆ ಕಾಣುತ್ತದೆ'. ಹೀಗೆ ಭಾವಿಸಿಕೊಳ್ಳುತ್ತ ಭರತನು ತನ್ನ ಸೇನೆಗೆ ಆದೇಶವನ್ನು ನೀಡಿದ, 'ವನವನ್ನೆಲ್ಲಾ ಹುಡುಕಿ ರಾಮಾಶ್ರಮವನ್ನು ಗುರುತಿಸಿ' ಎಂದು. ಸ್ವಲ್ಪ ಹೊತ್ತಾದ ಮೇಲೆ ಅವರು ಬಂದು ಅನತಿ ದೂರದಲ್ಲಿ ಹೊಗೆಯಾಡುತ್ತಿದೆಯೆಂದರುಹಿದರು. ಸೈನಿಕರು ಇರುವ ಸ್ಥಳದಲ್ಲೆ ಶಿಸ್ತಿನಿಂದ ನಿಂತಿರಬೇಕೆಂದು ಆಜ್ಞೆಮಾಡಿ ಸುಮಂತ್ರನ ಸಮೇತ ಹೊಗೆಯಾಡುತ್ತಿದ್ದ ಕಡೆಗೆ ಪಾದವನ್ನು ಬೆಳೆಸಿದ. ಅವನ ಉದ್ವಿಗ್ನತೆಯು ವಿಷಮಾವಸ್ಥೆಗೆ ಏರುತ್ತಿತ್ತು. ಸಂವೇದನಾಶೀಲತೆಯೇ ಅವನ ಸರ್ವಸ್ವವಾಗಿತ್ತು. ತನ್ನಿಂದ ಅಣ್ಣನು ಈ ದುರವಸ್ಥೆಗಿಳಿಯಬೇಕಾಯಿತಲ್ಲ ಎಂಬುದೆ ಅವನ ಕಂಬನಿ ಕಾವ್ಯದ ವಸ್ತು.

ಭರತನ ವನಾನ್ವೇಷಣೆಯ ಸಮಯದಲ್ಲಿ ಸೀತಾಪತಿಯು ಚಿತ್ರಕೂಟ ಪರ್ವತದ ಪರಿಸರದ ವರ್ಣನೆಯನ್ನು ಮಾಡುತ್ತ ಸೀತೆಯ ಬೇಸರವನ್ನು

ಕಳೆಯುತ್ತಿದ್ದ. ಅವರಿಬ್ಬರೂ ವನರಾಜ ರಾಣಿಯರಾಗಿ ಸ್ವರ್ಗಸುಖವನ್ನು ಕಾಣುತ್ತಿದ್ದರು. ಅವನು ಸೀತೆಯೆದುರಿಗೆ ಮಾಂಸವನ್ನಿಟ್ಟು "ಪ್ರಿಯೆ, ಇದು ಪರಿಶುದ್ಧವಾಗಿದೆ, ಇದು ರುಚಿಯಾಗಿದೆ, ಇದು ಚೆನ್ನಾಗಿ ಬೆಂದಿದೆ (ಇದನ್ನು ಭುಜಿಸು) ಎಂದು ಹೇಳುತ್ತ ಅವಳನ್ನು ಉಪಚರಿಸುತ್ತಿದ್ದನು". ಆ ಸಮಯದಲ್ಲಿ ಕಾಡಿನಲ್ಲಿ ಧೂಳೆದ್ದಿತು. ಕಾಡುಮೃಗಗಳು ಚೆಲ್ಲಾಪಿಲ್ಲಿಯಾದುವು. ಲಕ್ಷ್ಮಣನನ್ನು ಕರೆದು ಈ ಅವಸ್ಥೆಗೆ ಕಾರಣವೇನು ತಿಳಿಯೆಂದ. ಆತುರಗಾರ ಮಲ್ಲ "ಅಣ್ಣ, ಅಯೋಧ್ಯೆಯ ಸೇನೆ ?? ಧ್ವಜ ?? ಆ ಕೈಕೇಯಿ ಪುತ್ರನು ನಿಷ್ಕಂಟಕವಾಗಿ ರಾಜ್ಯವನ್ನು ಆಳಬೇಕೆಂದು ನಿರ್ಧರಿಸಿ ಬರುತ್ತಿದ್ದಾನೆ, ಯುದ್ಧಸನ್ನದ್ಧನಾಗು. ಆ ಕ್ರೂರ ಕೈಕೇಯಿಯನ್ನು ಅವಳ ಮಗನನ್ನೂ ಮತ್ತು ಆ ದುಷ್ಟ ಬಂಧುಬಳಗದವರನ್ನೆಲ್ಲಾ ಧ್ವಂಸಮಾಡಿ ಬಿಡುತ್ತೇನೆ" ಎಂದ. "ಲಕ್ಷ್ಮಣ, ಭರತನು ಅಂಥವನಲ್ಲ. ನಮ್ಮನ್ನು ಹಿಂದಕ್ಕೆ ಕರೆದುಕೊಂಡು ಹೋಗಲು ಬರುತ್ತಿರಬಹುದು. ಏನಿಲ್ಲದಿದ್ದರೂ ಈ ಜಾನಕಿಯನ್ನು ಕರೆದುಕೊಂಡುಹೋಗಲು ಮಹಾರಾಜನೇ ಬರುತ್ತಿರಬಹುದು. 'ಭರತ, ಲಕ್ಷ್ಮಣನಿಗೆ ರಾಜ್ಯವನ್ನು ಕೊಟ್ಟುಬಿಡೆಂದು' ನಾನು ಹೇಳಿದರೆ ಖಂಡಿತವಾಗಿಯೂ [illegible]ಗೆ ಕೊಟ್ಟುಬಿಡುವನು" ಎಂದು ಸಮಾಧಾನ ಮಾಡಿದ.

ಈ ಸಮಯದಲ್ಲೇ ನಡುನಡುಗುತ್ತ ಜಟಾಜೂಟಧಾರಿಯಾಗಿ ಗುರುತಿಸಲೂ ಸಾಧ್ಯವಾಗದ ಸ್ಥಿತಿಯಲ್ಲಿದ್ದ ಭರತನು 'ಅಣ್ಣ' ಎಂದಷ್ಟನ್ನು ಮಾತ್ರ ಉಚ್ಚರಿಸಿ ಅಣ್ಣನ ಪಾದಗಳ ಮೇಲೆ ಬಿದ್ದು ಕಣ್ಣೀರಿನಿಂದ ತೋಯಿಸಿದ. ರಾಮಲಕ್ಷ್ಮಣರು ಸುಮಂತ್ರನನ್ನೂ ಗುಹ ಶತ್ರುಘ್ನರನ್ನೂ ಆಲಿಂಗಿಸಿಕೊಂಡರು. ಭರತನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಸಾವಧಾನವಾಗಿ ಕುಶಲ ಪ್ರಶ್ನೆ ಮಾಡಿದ. ಪ್ರತಿಯೊಬ್ಬರನ್ನೂ ವಿಚಾರಿಸಿದ. ಪೂಜ್ಯ ತಂದೆಯು ಆರೋಗ್ಯವಾಗಿರುವರೆಯೆಂದು ಕೇಳಿದ. ಭರತನು ಚಿಕ್ಕವನು, ರಾಜನೀತಿಯ ಜ್ಞಾನ ಕಡಿಮೆ, ರಾಜ್ಯಾಡಳಿತದಲ್ಲಿ ಅನುಭವವಿಲ್ಲ, ಈಗ ರಾಜನಾಗಿದ್ದಾನೆ ಎಂದುಕೊಂಡು ಪ್ರಜಾಹಿತೈಷಿಯಾದ ರಾಜಾರಾಮ ಒಂದು ದೊಡ್ಡ ರಾಜನೀತಿಯ ಉಪದೇಶವನ್ನೇ ಮಾಡಿದ. ಭರತನು ಅವನ ತೊಡೆಯ ಮೇಲೆ ಕುಳಿತು ಅಣ್ಣನ ಪ್ರೀತಿ ಪ್ರವಾಹವು ವಿದ್ಯುಚ್ಛಕ್ತಿನಂತೆ

ದೇಶದಲ್ಲಿ ಪ್ರವಹಿಸುವ ಅನುಭವದಿಂದ ಸಾವಧಾನವಾಗಿ ಕೇಳುತ್ತಿದ್ದನು. ಪರಿಸರವು ಶಾಂತವಾಗಿತ್ತು.

"ಧರ್ಮಭ್ರಷ್ಟನಾದ ನನಗೆ ಈ ರಾಜಧರ್ಮದಿಂದೇನಾಗಬೇಕು? ನಮ್ಮ ವಂಶದಲ್ಲಿ ಜ್ಯೇಷ್ಠಪುತ್ರನೇ ರಾಜನಾಗಬೇಕೆಂಬ ಧರ್ಮ ಆಚರಣೆಯಲ್ಲಿದೆ. ಹಿಂದಿರುಗಿ ಬಂದು ರಾಜನಾಗು. ನಮ್ಮ ವಂಶವನ್ನಾಳಿಸು. ನಿನ್ನ ವಿರಹ ಯಾತನೆಯಿಂದ ನಿನ್ನ ನಾಮೋಚ್ಚಾರಣೆ ಮಾಡುತ್ತ ಮಹಾರಾಜನು ಗತಿಸಿದ. ನಾನೇನೋ ಶ್ರಾದ್ಧ ಕರ್ಮಗಳನ್ನು ವಿಧಿವತ್ತಾಗಿ ಮಾಡಿದೆ. ಆದರೆ ನೀನು ಅಪ್ಪನಿಗೆ ಅಪರ ಕರ್ಮಗಳನ್ನು ಮಾಡಿದರೇನೆ ಅವನಿಗೆ ಸಲ್ಲುವುದು" ಎಂದನು. ಆ ನಾಲ್ವರ ದುಃಖವನ್ನು ಅಳೆಯುವ ಪಾತ್ರೆ ಯಾವುದಿದ್ದೀತು? ಇಕ್ಷ್ವಾಕುವಂಶದ ಮಂತ್ರಿಯೂ ಭಕ್ತನೂ ಆದ ಸುಮಂತ್ರನು ದಾಶರಥಿಗಳನ್ನು ಮಂದಾಕಿನೀ ತೀರ್ಥಕ್ಕೆ ಕೈಹಿಡಿದುಕೊಂಡು ಹೋಗಿ ಅವರಿಂದ ಪಿತೃತರ್ಪಣಾದಿಗಳನ್ನು ಕೊಡಿಸಿದ. ಅನಂತರ ಅವರು ಪರ್ಣಕುಟೀರವನ್ನು ಸೇರಿದರು.

ಭಾವಾವೇಶದ ಸೋಲು ದೃಢಚಿತ್ತದ ಗೆಲುವು

ಭರತನು ಚಿತ್ರಕೂಟಕ್ಕೆ ಪ್ರಯಾಣ ಬೆಳಸುವ ಮುನ್ನವೆ ತಾನು ಪಟ್ಟಾಭಿಷಿಕ್ತನಾಗುವುದಿಲ್ಲವೆಂದೂ, ಶ್ರೀರಾಮನನ್ನು ಹಿಂದಕ್ಕೆ ಕರೆತಂದು ಪಟ್ಟಗಟ್ಟುವೆನೆಂದೂ ಇಲ್ಲದಿದ್ದರೆ ಅರಣ್ಯದಲ್ಲೆ ಕಟ್ಟುವೆನೆಂದೂ ಅವನು ಬಾರದಿದ್ದರೆ ತಾನೂ ಅವನ ಜತೆಯಲ್ಲೆ ವನವಾಸ ಮಾಡುವೆನೆಂದೂ ಶೀರ್ಮಾನ ಮಾಡಿಕೊಂಡಿದ್ದ. ತತ್ಪರಿಣಾಮವಾಗಿ ಶ್ರೀರಾಮನು ಹಿಂದಿರುಗಿ ಪಟ್ಟಾಭಿಷಿಕ್ತನಾಗಬೇಕೆಂದು ಹಲವು ವಿಧಗಳಲ್ಲಿ ಭಾವಾವೇಶದಿಂದ ಪ್ರಾರ್ಥಿಸಿದ.

"ಇಕ್ಷ್ವಾಕುವಂಶದ ಪದ್ಧತಿಯಂತೆ, ಆಚರಣೆಯಲ್ಲಿರುವ ಧರ್ಮದಂತೆ ನೀನು ಜ್ಯೇಷ್ಠನಾಗಿರುವುದರಿಂದ ಹಿಂದಿರುಗಿ ಬಂದು ಪಟ್ಟಾಭಿಷಿಕ್ತನಾಗು. ಇಲ್ಲಿಗೆ ಆಗಮಿಸಿರುವ ಸ್ತ್ರೀಯರಾದಿಯಾಗಿ ಎಲ್ಲರೂ ನಿನ್ನ ಪಟ್ಟಾಭಿಷೇಕವನ್ನು ನೋಡಲು ಬಯಸುತ್ತಿದ್ದಾರೆ. ಅದನ್ನು ಕರುಣಿಸು. ನನ್ನ ತಾಯಿಯೂ ಅದನ್ನೇ ಅಪೇಕ್ಷಿಸುತ್ತಿದ್ದಾಳೆ. ನನಗೆ ಕೊಟ್ಟ ರಾಜ್ಯವನ್ನು ನಿನಗರ್ಪಿಸುತ್ತಿದ್ದೇನೆ. ದಯವಿಟ್ಟು ಸ್ವೀಕರಿಸು. ನನಗೆ ನಿಜವಾಗಿಯೂ ಆಳುವ ಶಕ್ತಿ

ಯಿಲ್ಲ. ನಿನ್ನ ಹಾಗೆ ನಾನು ಸರ್ವಜ್ಞನಲ್ಲ. ನಾನು ಪರಸ್ಥಳಕ್ಕೆ ಹೋಗಿದ್ದಾಗ ನನ್ನ ತಾಯಿಯು ನನಗೋಸ್ಕರ ಒಂದು ಪಾಪಕೃತ್ಯವನ್ನು ಮಾಡಿದಳು. ಅವಳು ಕ್ಷುದ್ರ ಬುದ್ಧಿಯುವಳು. ಆ ಕೃತ್ಯಕ್ಕೆ ಎಂದಿಗೂ ನನ್ನ ಒಪ್ಪಿಗೆ ಇಲ್ಲ. ನನ್ನಮೇಲೆ ನೀನು ಪ್ರಸನ್ನನಾಗು. ನಾನು ಧರ್ಮ ಸಂಕಟಕ್ಕೆ ಸಿಕ್ಕಿದ್ದೇನೆ. ಆದ್ದರಿಂದಲೇ ಪಾಪಿಯಾದ ಈ ತಾಯಿಯನ್ನು ಕೊಲ್ಲದೆ ಬಿಟ್ಟಿದ್ದೇನೆ. ಅವಳು ಶಿಕ್ಷಾರ್ಹವಾದ ಅಪರಾಧವನ್ನು ಮಾಡಿದ್ದಾಳೆ. ಅದಕ್ಕೆ ನನ್ನನ್ನು ಶಿಕ್ಷಿಸಬೇಡ" ಎಂದನು (ಅಯೋ. ಸ. ೧೦೬. ಶ್ಲೋ. ೭–೧೧). ಭರತನು ಮತ್ತೆ "ಧರ್ಮಜ್ಞನಾದ ತಂದೆಯನ್ನು ನಿಂದಿಸಬಾರದು, ಆದರೆ ಹೆಂಡತಿಯ ಮಾತಿಗೆ ಬೆಲೆಗೊಟ್ಟ. ಅಣ್ಣ, ಕೈಕೇಯಿಯ ಕೋಪಕ್ಕೆ ಭಯಪಟ್ಟೋ ಅವಳ ಮೇಲಿರುವ ವ್ಯಾಮೋಹದಿಂದಲೊ ಅಥವಾ ಅವಿವೇಕದಿಂದಲೊ, ತಂದೆಯು ತಪ್ಪುಮಾಡಿದನು. ಅದನ್ನು ನೀನು ಸರಿಪಡಿಸು. ತಂದೆಯ ತಪ್ಪನ್ನು ತಿದ್ದಲು ಯಾವನು ಉದ್ದೇಶಿಸುವನೋ ಅವನೇ ಸತ್ಪುತ್ರ, ಹಾಗಿಲ್ಲದವನು ಒಳ್ಳೆಯ ಪುತ್ರನೆನಿಸಲಾರ. ನೀನು ಸತ್ಪುತ್ರನೆನಿಸು. ಕ್ಷತ್ರಿಯ ಧರ್ಮವನ್ನು ಪಾಲಿಸು. ತಾಪಸವೃತ್ತಿ ನಿನಗಲ್ಲ. ಚತುರಾಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಪರಿಗಣಿತವಾಗಿದೆ. ಅದು ತಾಪಸ ವೃತ್ತಿಗಿಂತಲೂ ಕಠಿಣವಾದದ್ದೆಂದಿದ್ದಾರೆ. ಕೋಸಲದೇಶದ ಪ್ರಜೆಗಳೆಲ್ಲರೂ ನಿನ್ನ ಗೃಹಸ್ಥಾಶ್ರಮದ ಸದಸ್ಯರು. ರಾಜನಾಗಿ ಅವರನ್ನು ಕಾಪಾಡು. ಸರ್ವಪ್ರಕಾರದಿಂದಲೂ ನೀನು ನನಗೆ ಹಿರಿಯವ, ನಾನು ಕಿರಿಯವ, ಹಿರಿಯನ ಧರ್ಮವನ್ನು ರಾಜನಾಗಿ ಪಾಲಿಸು. ಇಲ್ಲಿಯೇ ಪಟ್ಟಾಭಿಷಿಕ್ತನಾಗು. ಈ ಪ್ರಜೆಗಳು ನನಗೂ ನನ್ನ ತಾಯಿಗೂ ಹಾಕುತ್ತಿರುವ ಶಾಪವನ್ನು ತಪ್ಪಿಸು. ಈ ಎಲ್ಲವನ್ನೂ ಕಡೆಗಣಿಸಿ, ನೀನು ಕಾಡಿಗೆ ಹೋಗುವುದಾದರೆ ನಾನೂ ಸಹ ನಿನ್ನ ಜತೆಗೇ ಬರುತ್ತೇನೆ, ವಸಿಷ್ಠ ಜಾಬಾಲಿ ಋಷಿಗಳ ಬೋಧನೆಗಳಿಗಾದರೂ ಕಿವಿಗೊಡು" ಎಂದನು. ಶ್ರೀರಾಮನು ದೃಢಚಿತ್ತನಾಗಿರುವುದನ್ನು ಗಮನಿಸಿದ. ಸುಮಂತ್ರನನ್ನು ಕರೆದು "ಈ ನೆಲದ ಮೇಲೆ ದರ್ಭೆಯನ್ನು ಹಾಸು. ರಾಮನು ಹಿಂದಿರುಗುವ ಪರ್ಯಂತ ಸತ್ಯಾಗ್ರಹವನ್ನು ಹೂಡುತ್ತೇನೆ" ಎಂದ. ಪ್ರಾಜ್ಞನಾದ ಸುಮಂತ್ರನು ಹಾಗೆ ಮಾಡಲಿಲ್ಲ. ಭರತನು ತಾನೆ ತಂದು ಹಾಸಿಕೊಂಡು ಮಲಗಿಯೇ ಬಿಟ್ಟ. ಉದ್ರಿಕ್ತನಾಗಿ ಪ್ರಜೆಗಳತ್ತ ತಿರುಗಿದ. ನೀವಾದರೂ

ಬೇಡಿಕೊಳ್ಳಬಾರದೆ ಎಂದು ಘುಡಿಘುಡಿಸಿದ. ಆದರೂ ಅವರು ಬೇಡಿಕೊಳ್ಳಲೇ ಇಲ್ಲ. ಧರ್ಮವೆಲ್ಲಿದೆ ಎಂದು ಶ್ರೀರಾಮನ ಮುಖಭಂಗಿಯಿಂದ ಅರಿತರು. ನೆರೆದಿದ್ದವರನ್ನೆಲ್ಲಾ ಉದ್ದೇಶಿಸಿ ಶ್ರೀರಾಮನ ವನವಾಸಕ್ಕೆ ತಾನು ಯಾವ ರೀತಿಯಲ್ಲೂ ಕಾರಣನಲ್ಲವೆಂದೂ ತಂದೆಯ ಮಾತನ್ನು ನಡೆಸಲೇ ಬೇಕಾದರೆ ತಾನೇ ಹದಿನಾಲ್ಕು ವರ್ಷಗಳಕಾಲ ಕಾಡಿನಲ್ಲಿರುತ್ತೇನೆಂದೂ ಹೇಳಿದ. ಶ್ರೀರಾಮನ ಪ್ರತ್ಯುತ್ತರಗಳೂ ಪ್ರಭಾವಯುತವಾಗಿದ್ದುವು. ಆದರೆ ಪರಿಣಾಮವೇನಾಗುವುದೊ ಎಂದು ಚಿಂತಿಸುತ್ತಿದ್ದ. ಧರ್ಮಸಂಕಟಕ್ಕೆ ಸಿಲುಕಿಕೊಂಡಿದ್ದ. ಆ ಸಮಯದಲ್ಲಿ ಅಶರೀರವಾಣಿ ಕೇಳಿಸಿತು. ಎಲ್ಲಿ ಶ್ರೀರಾಮನು ಭರತನೊಡ್ಡಿದ ಮಹಾ ಪ್ರಲೋಭನಕ್ಕೆ ಮಣಿದು ಹಿಂದಿರುಗಿದರೆ ರಾವಣನ ಸಂಹಾರವಾಗುವುದಿಲ್ಲ ಎಂಬ ಭಯದಿಂದ ಆಕಾಶವಾಣಿ ಹೀಗೆ ನುಡಿಯಿತು. "ಭರತ, ನೀನು ಸತ್ಕುಲ ಪ್ರಸೂತನಾಗಿದ್ದೀಯೆ. ವಿವೇಕಿಯೂ ಸಚ್ಚರಿತ್ರನೂ ಆಗಿದ್ದೀಯೆ. ಮಹಾ ಕೀರ್ತಿಶಾಲಿ ನೀನು. ನಿನ್ನ ತಂದೆಗೆ ಶ್ರೇಯಸ್ಸನ್ನು ಬಯಸುವುದಾದರೆ, ರಾಮನ ಮಾತನ್ನು ನೀನು ಒಪ್ಪಬೇಕು." ಶ್ರೀರಾಮನು ಈ ಮುನ್ನ ಹೇಳಿದ್ದುದೇನೆಂದರೆ "ಕೈಕೇಯಿ ಕೇಳಿದ್ದೂ ತಂದೆಯು ಸಲ್ಲಿಸಿದ್ದೂ ಎರಡೂ [illegible]ಕ್ತವೇ. ತಂದೆತಾಯಿಗಳು ವನವಾಸಾನಂತರ ಪಟ್ಟಾಭಿಷಿಕ್ತನಾಗೆಂದು ಹೇಳುವಂತೆಯೇ ನಡೆದುಕೊಳ್ಳುತ್ತೇನೆ. ಹೀಗೆ ಆಚರಿಸುವುದರಿಂದ ತಂದೆಯನ್ನು ಸತ್ಯಸಂಧನನ್ನಾಗಿಯೇ ಉಳಿಸಿದಂತಾಗುತ್ತದೆ. ಕೈಕೇಯಿಯು ಇದೇ ರೀತಿ ಮಹಾರಾಜನನ್ನು ಕೇಳಿಕೊಂಡಿದ್ದಾಳೆ (ಅಯೋ. ಸ. ೧೧೧. ಶ್ಲೋ. ೩೧-೩೨). ಕೈಕೇಯಿಯನ್ನು ತಾಯಿಯೆಂದೇ ತಿಳಿದು ತನ್ನ ಮತ್ತು ಸೀತೆಯಾಣೆ ನಡೆದುಕೊ" ಎಂದ. ರಾಜಪುರೋಹಿತರ ಸಲಹೆಯಂತೆ ಶ್ರೀರಾಮನು ಸುವರ್ಣ ಪಾದುಕೆಗಳನ್ನು ಮೆಟ್ಟಿ ಭರತನಿಗೆ ಕರುಣಿಸಿದ. ಪಾದುಕಾ ಕಿರೀಟಿಯಾದ ಭರತನು "ಹದಿನಾಲ್ಕು ವರ್ಷಗಳು ಕಳೆದ ಮಾರನೇ ದಿನವೇ ನಿನ್ನ ದರ್ಶನವಾಗದಿದ್ದರೆ ಬೆಂಕಿಯಲ್ಲಿ ಬೀಳುವೆನು" ಎಂದು ಪ್ರತಿಜ್ಞೆಮಾಡಿದ. ತಾನೂ ತಾಪಸೀ ಜೀವನವನ್ನು ನಡೆಸುವೆನೆಂದು ಮರು ಪ್ರಯಾಣಕ್ಕೆ ಸಿದ್ಧನಾದ. ಚಿತ್ರಕೂಟದ ಜಡಚೇತನಗಳೆಲ್ಲಾ (ಕೋಸಲದವರೂ ಕೂಡ) ಹಿಮಾಲಯ ಸದೃಶ ಅಲೆಗಳಿಗೆ ಸಿಕ್ಕಿದ ಹಡಗು ನಡುಗುವಂತೆ ನಡುಗಿಹೋಯಿತು ಭರತನ ಶಪಥದಿಂದ.

ಇಂಥ ಸಂವೇದನಾಶೀಲ ಭಾವುಕ ಭರತನಲ್ಲಿ ವೈಚಾರಿಕತೆಯನ್ನು ಹೇಗೆ ನಿರೀಕ್ಷಿಸುವುದು ? ಈ ಅವಗಡಕ್ಕೆಲ್ಲಾ ಕಾರಣಕರ್ತರು ದಶರಥ ಕೈಕೇಯಿಯರು. ಅವರ ಕುತಂತ್ರದಿಂದ ಇವೆಲ್ಲ ನಡೆಯಿತೆಂಬ ವಚನ ಲಕ್ಷ್ಮಣನಿಂದ. ಭರತನು ಅವನೊಡನೆ ವ್ಯವಹರಿಸಿದ್ದೇನು ? ಕೈಕೇಯಿಯ ವರಗಳಿಕೆಯು ಮತ್ತೆ ಅವಳ ಮಗನ ಶಪಥ ಇವುಗಳ ಪರಿಣಾಮ ಕಾವ್ಯದ ಆದ್ಯಂತವನ್ನೆಲ್ಲಾ ಆಕ್ರಮಿಸಿಕೊಂಡಿದೆ. ಇಕ್ಷ್ವಾಕುವಂಶದ ಧ್ಯೇಯ ಸಾಕ್ಷಾತ್ಕಾರಕ್ಕೆ ಮಹಾತ್ಮ ಭರತನ ಕೊಡುಗೆ ಇದೇ,

## ಪಾದುಕಾ ಪಟ್ಟಾಭಿಷೇಕ

ಭರತನು ಶ್ರೀರಾಮನ ಪಾದುಕೆಗಳನ್ನು ಪಟ್ಟದಾನೆಯ ಶಿರಸ್ಸಿನ ಮೇಲಿಟ್ಟು ಸಂತುಷ್ಟನಾಗಿ ಶತ್ರುಘ್ನನೊಡನೆ ರಥವನ್ನೇರಿದನು. ಅಲ್ಲಿಂದ ಭರದ್ವಾಜಾಶ್ರಮಕ್ಕೆ ಬಂದು. ಮಹರ್ಷಿಗಳ ಪ್ರಶ್ನೆಗಳಿಗೆ ಉತ್ತರವನ್ನಿತ್ತು ಕುಲಗುರುಗಳಾದಿಯಾಗಿ ಪುರಜನರೂ, ಸ್ತ್ರೀಯರೂ ಎಷ್ಟು ಬೇಡಿದರೂ ಶ್ರೀರಾಮನು ತಾನು ತಂದೆಯ ಎದುರಿಗೆ ಕೈಗೊಂಡ ಪ್ರತಿಜ್ಞೆಯನ್ನು ಅಕ್ಷರಶಃ ಪಾಲಿಸುವೆನೆಂದೂ ಅದರಿಂದ ಹದಿನಾಲ್ಕು ವರ್ಷಗಳಕಾಲ ವನವಾಸವನ್ನು ಪೂರೈಸುವೆನೆಂದೂ ಹೇಳಿದ್ದನ್ನು ಭರಧ್ವಾಜರಿಗೆ ತಿಳಿಸಿದನು (ಅಯೋ. ಸ. ೧೧೩). ಆಗ ಭರದ್ವಾಜರು ಸಂತುಷ್ಟರಾಗಿ "ನೀನು ಪುರುಷಶ್ರೇಷ್ಠ, ನಿನ್ನ ತಂದೆಯಾದ ದಶರಥ ಮಹಾರಾಜನು ನಿಜವಾಗಿಯೂ ಪಿತೃ ಋಣದಿಂದ ಮುಕ್ತನಾದನು. ಇಂಥ ಸರ್ವಜ್ಞನೂ ಧರ್ಮನಿಷ್ಠನೂ ಆದ ನಿನ್ನನ್ನು ಮಗನನ್ನಾಗಿ ಪಡೆದು ಅವನು ಧನ್ಯನಾದನು" ಎಂದು ಕೊಂಡಾಡಿ ಬೀಳ್ಕೊಟ್ಟರು.

ಭರತನು ಪ್ರಯಾಣವನ್ನು ಮುಂದುವರಿಸಿ ಅಯೋಧ್ಯಾ ನಗರವನ್ನು ಕಂಡನು. ಅದರ ದುರವಸ್ಥೆಯನ್ನು ಕಂಡು ಬಹಳವಾಗಿ ಮರುಗಿ ಅರಮನೆಯನ್ನು ಹೊಕ್ಕನು. ಕಾಳ್ಗಿಚ್ಚಿನೊಳಕ್ಕೆ ನುಗ್ಗಿದಂತಾಯಿತು. ತನ್ನ ಮಾತೆಯರು ಅಯೋಧ್ಯಾ ಅರಮನೆಯಲ್ಲೇ ವಾಸಿಸುವಂತೆ ಏರ್ಪಾಡು ಮಾಡಿದನು. ಸುಮಿತ್ರೆ ಊರ್ಮಿಳೆಯರಲ್ಲಿ ವಿಶ್ವಾಸವನ್ನಿಟ್ಟನು. ಶ್ರೀರಾಮನು ಬಂದು ಪಟ್ಟಾಭಿಷಿಕ್ತನಾಗುವವರೆಗೆ ತಾನು ನಂದಿಗ್ರಾಮದಲ್ಲಿ ವಾಸವಾಗಿ ಪಾದುಕೆ

ಗಳಿಗೆ ವಿಧ್ಯುಕ್ತವಾಗಿ ಪಟ್ಟಗಟ್ಟಿ ಮಂತ್ರಿಗಳ ಮತ್ತು ಶತ್ರುಘ್ನನ ನೆರವಿನಿಂದ ನ್ಯಾಸರೂಪವಾಗಿ ಬಂದಿರುವ ಕೋಸಲದೇಶವನ್ನು ರಕ್ಷಿಸುವೆನೆಂದ. ಎಲ್ಲರೂ ಒಪ್ಪಿ ಅವನನ್ನು ಕೊಂಡಾಡಿದರು. ಸಂತುಷ್ಟನಾದ ಕೈಕೇಯೀ ಪುತ್ರ ಎಲ್ಲಾ ಮಾತೆಯರಿಗೂ ಮಣಿದು ಸುಮಂತ್ರನಿಂದ ಸಿದ್ಧವಾಗಿದ್ದ ರಥವನ್ನೇರಿ ನಂದಿ ಗ್ರಾಮವನ್ನು ಸೇರಿದನು. ಆಮೇಲೆ ಅವನು ಶ್ರೀರಾಮನ ಪಾದುಕೆಗಳನ್ನು ಸಿಂಹಾಸನದಲ್ಲಿಟ್ಟು ಪಟ್ಟಾಭಿಷೇಕ ಮಾಡಿದನು. ಆ ಸಮಯದಲ್ಲಿ ಪಾದುಕೆ ಗಳಿಗೆ ಛತ್ರಚಾಮರಗಳನ್ನು ತಾನೇ ಹಿಡಿದು ನಿಂತನು. ಹೀಗೆ ಭರತನು ಅಣ್ಣನ ಪಾದುಕೆಗಳಿಗೆ ಪಟ್ಟಾಭಿಷೇಕಮಾಡಿ, ರಾಜಕಾರ್ಯಗಳೆಲ್ಲವನ್ನೂ ಪ್ರತಿದಿನ ಆ ಪಾದುಕೆಗಳಿಗ ಅರಿಕೆ ಮಾಡಿಕೊಳ್ಳುತ್ತ, ಅವುಗಳಿಗೆ ಅಧೀನನಾಗಿ ರಾಜಕಾರ್ಯ ಗಳನ್ನು ನಡೆಸಲಾರಂಭಿಸಿದನು. ನೆರೆದಿದ್ದವರೆದುರಿಗೆ "ಶ್ರೀರಾಮನಿಗೆ ಪಟ್ಟಾಭಿಷೇಕವಾಗಬೇಕು—ಪ್ರಜೆಗಳೆಲ್ಲರೂ ಆನಂದದಿಂದ ನಲಿಯಬೇಕು. ಆಗಲೇ ನನ್ನ ಮನಸ್ಸಿಗೆ ನೆಮ್ಮದಿ. ಆಗಲೇ ನನಗೆ ಒಳ್ಳೆಯ ಹೆಸರು ಬಂದೀತು. ಆಗ ನನಗಾಗುವ ಸಂತೋಷವು ರಾಜ್ಯ ಲಾಭಕ್ಕಿಂತ ನಾಲ್ಮಡಿ ಹೆಚ್ಚುವುದು" ಎಂದು ದೈನ್ಯದಿಂದ ಹಲುಬುವನು (ಅಯೋ. ಸ. ೧೧೫). ತಾನು ತಿಳಿದು ಕೊಂಡಿದ್ದಂತೆ ತಾಯಿಯ ದೌಷ್ಟ್ಯದಿಂದಾಗಿ ಏನೂ ವ್ರತನಿಷ್ಠನಾಗಿ ಗೆಡ್ಡೆ ಗೆಣಸುಗಳನ್ನು ತಿನ್ನುತ್ತ ಜಟಾಜೂಟಧಾರಿಯಾಗಿ ಹದಿನಾಲ್ಕು ವರ್ಷಗಳು ಅಹೋರಾತ್ರಿ ನಿರೀಕ್ಷಣಾ ತಪಸ್ಸನ್ನಾಚರಿಸುತ್ತಿದ್ದ.

ಭರತನು ತೀವ್ರ ಸಂವೇದನಾಶೀಲನಾದವನೂ ಗಹನ ವಿಚಾರಗಳಿಗೆ ಮನ ಸೋಲದವನೂ, ಮುಗ್ಧನೂ ಆಗಿದ್ದ. ಅವನು ರಾಜ್ಯಾಡಳಿತದ ಬಹು ಭಾಗವನ್ನೂ ಶತ್ರುಘ್ನನ ಹೆಗಲ ಮೇಲೆ ಹೊರಿಸಿದನು. ಧರ್ಮಪರಾಯಣೆ ಯರೂ ಸಹಧರ್ಮಚಾರಿಣಿಯರೂ ಆದ ಮಾಂಡವಿ, ಶ್ರುತಕೀರ್ತಿಯರೂ ನಂದಿಗ್ರಾಮದ ಆಶ್ರಮದಲ್ಲಿ ಬ್ರಹ್ಮಚಾರಿಣಿಯರಾಗಿ ತಪೋನಿರತರಾದರು. ಸೀತಾ ದರ್ಶನಕ್ಕೆ ಹಾತೊರೆಯುತ್ತ. ಕವಿಯು ಅದ್ಭುತವಾದ ಮೌನವನ್ನು ತಾಳಿ ಈ ಹದಿನಾಲ್ಕು ವರ್ಷಗಳ ಅರಮನೆಯ ಬಾಳನ್ನು ನಿರೂಪಿಸಿಲ್ಲ. (ಪ್ರಜಾಪಾಲನೆ ಹೇಗೆ ನಡೆದಿರಬಹುದೆಂಬುದಕ್ಕೆ ಶತ್ರುಘ್ನನ ಪಾತ್ರವನ್ನು ನೋಡಿ)

ಹದಿನಾಲ್ಕು ವರ್ಷಗಳ ನಂದಿಗ್ರಾಮದ ಜೀವನದ ಇಣುಕು ನೋಟ

ಕವಿಯು ಸಂದರ್ಭಾನುಸಾರ ಲಕ್ಷ್ಮಣ ರಾಮರ ಬಾಯಲ್ಲಿ ಭರತನ ವಿಚಾರವಾಗಿ ಒಂದೆರಡು ವಾಕ್ಯಗಳನ್ನು ಆರಿಸಿದ್ದಾನೆ. ಪಂಚವಟಿಯಲ್ಲಿದ್ದಾಗ ಶ್ರೀರಾಮನಿಗೆ ಪ್ರಿಯವಾದ ಹೇಮಂತ ಋತುವನ್ನು ಲಕ್ಷ್ಮಣನು ವರ್ಣಿಸುತ್ತಾ ಭರತನನ್ನು ನೆನಪಿಗೆ ತರುತ್ತಾನೆ. " ಅಣ್ಣ, ಈ ಸಮಯದಲ್ಲಿ ಧರ್ಮಾತ್ಮನಾದ ಭರತನು ನಿನ್ನಲ್ಲಿ ಭಕ್ತಿಯನ್ನಿಟ್ಟು ಅಯೋಧ್ಯೆಯಲ್ಲಿ ತಪಸ್ಸು ಮಾಡುತ್ತಿರುವನು. ಆ ಪುರುಷ ಶ್ರೇಷ್ಠನು ನಿನ್ನ ವಿರಹ ದುಃಖದಿಂದ ಪೀಡಿತನಾಗಿದ್ದಾನೆ. ರಾಜ್ಯವನ್ನೂ ರಾಜನೆಂಬ ಹೆಮ್ಮೆಯನ್ನೂ ನಾನಾ ಬಗೆಯ ರಾಜಭೋಗಗಳನ್ನೂ ತ್ಯಜಿಸಿದ್ದಾನೆ. ಆಹಾರ ನಿಯಮವನ್ನಿಟ್ಟುಕೊಂಡು ತಪಸ್ವಿಯಾಗಿ, ಶೀತಳವಾದ ಬರಿಯ ನೆಲದಮೇಲೆ ಮಲಗುತ್ತಿರುವನಲ್ಲ!! ಅಣ್ಣಾ, ಇಷ್ಟು ಹೊತ್ತಿನಲ್ಲಿ ಭರತನೂ ಸಹ ಪ್ರಜೆಗಳಿಂದ ಪರಿವೃತನಾಗಿ ಸ್ನಾನಕ್ಕೋಸ್ಕರ ಸರಯೂ ನದಿಗೆ ಹೋಗುತ್ತಿರಬಹುದು ? ಭರತನಾದರೊ ಸುಖವಾಗಿ ಬೆಳೆದವನು. ಸುಕುಮಾರನಾದ ಪ್ರಕೃತಿಯುಳ್ಳವನು. ಸುಖದಲ್ಲಿರಬೇಕಾದವನು. ಅವನು ಬೆಳ್ಳಂಬೆ ಜಾವದಲ್ಲಿ ಹೋಗಿ ಸರಯೂ ನದಿಯಲ್ಲಿ ಹೇಗೆ ಮುಳುಗುವನೊ ? ವೀರನು ತಾವರೆಯ ದಳದಂತೆ ವಿಶಾಲವಾದ ನೇತ್ರಗಳುಳ್ಳವನು, ಶ್ಯಾಮಲಾಂಗ. ಕೃಶವಾದ ಉದರವುಳ್ಳ ಮಹಾ ಪುರುಷ, ಧರ್ಮಜ್ಞ, ಸತ್ಯಸಂಧ; ಅಕೃತ್ಯಗಳಿಗೆ ನಾಚತಕ್ಕವನು; ಜಿತೇಂದ್ರಿಯ; ಭರತನು ಸದಾ ಪ್ರಿಯವಾಗಿ ಮಾತನಾಡತಕ್ಕವನು. ಆಜಾನುಬಾಹುವಾದ ಅವನನ್ನು ನೋಡಿದರೆ ಆನಂದವಾಗುವುದು; ಶತ್ರುಗಳನ್ನು ಮರ್ದಿಸಬಲ್ಲ ಶೂರ. ಅಂಥವನು ಸಕಲ ಭೋಗಗಳನ್ನು ಪರಿತ್ಯಜಿಸಿ ತ್ರಿಕರಣ ಶುದ್ಧಿಯಿಂದ ನಿನ್ನನ್ನು ನಂಬಿದ್ದಾನೆ. ಅಣ್ಣ, ನಿನ್ನ ತಮ್ಮನಾದ ಭರತನು ಮಹಾತ್ಮನೇ ಸರಿ. 'ಮನುಷ್ಯರು ತಾಯಿಯ ಸ್ವಭಾವವನ್ನು ಪಡೆಯುತ್ತಾರೆ, ತಂದೆಯ ಸ್ವಭಾವವನ್ನಲ್ಲ' ಎಂದು ಲೋಕದಲ್ಲಿ ಪ್ರವಾದ ಉಂಟು. ಭರತನು ಈ ಪ್ರವಾದವನ್ನು ಸುಳ್ಳುಮಾಡಿದನು. ಅಣ್ಣ, ನಮ್ಮ ಚಿಕ್ಕಮ್ಮನಿಗೆ ಪತಿಯಾದರೊ ದಶರಥ ಮಹಾರಾಜ. ಮಗನಾದರೊ ಇಂಥ ಸತ್ಪುರುಷನಾದ ಭರತ. ಹೀಗಿರುವಾಗ ಕೈಕೇಯಿಗೆ ಅಷ್ಟು ಕ್ರೂರ ಸ್ವಭಾವ ಹೇಗೆ ಬಂದಿರಬಹುದು ? " ಎಂದು ಹೇಳಿದನು (ಅರ. ಸ. ೧೬). ಆಗ ರಾಮನು ಭರತನ

ವಿಚಾರವನ್ನು ಕೇಳಿ ಸಂತುಷ್ಟನಾದ. ಆದರೆ ಕೈಕೇಯಿಯು ಪ್ರಸ್ತಾಪ ಮಾಡಿದಾಗ ನೋವನ್ನನುಭವಿಸಿದ.

ಶ್ರೀರಾಮನು ರಥದಲ್ಲಿ ಕುಳಿತು ವನಕ್ಕೆ ಹೋಗುತ್ತಿರುವಾಗ ಪೌರರು ಹಿಂಬಾಲಿಸಿ ಗೋಳಾಡುತ್ತಾರೆ. ಆಗ ಶ್ರೀರಾಮನು ಅವರನ್ನು ಸಾಂತ್ವನ ಗೊಳಿಸುತ್ತಾನೆ. "ಪ್ರಜೆಗಳೆ, ಅಯೋಧ್ಯಾ ನಿವಾಸಿಗಳಾದ ನಿಮಗೆ ನನ್ನಲ್ಲಿ ಯಾವ ಪ್ರೀತಿಗೌರವಗಳಿವೆಯೊ ಅವನ್ನು ಭರತನಲ್ಲಿ ತೋರಿಸಿರಿ. ವಿಶೇಷವಾಗಿ ಅದರಿಂದ ನನಗೆ ಸಂತೋಷವಾಗುವುದು. ಕೈಕೇಯಿಗೆ ಆನಂದವರ್ಧಕನಾದ ಭರತನು ಒಳ್ಳೆಯ ನಡತೆಯುಳ್ಳವನು. ನಿಮಗೆ ಪ್ರಿಯವಾದುದನ್ನೂ ಹಿತವಾದುದನ್ನೂ ಲೋಪವಿಲ್ಲದೆ ಸಾಧಿಸಿಕೊಡುವನು. ಅವನು ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ಜ್ಞಾನದಲ್ಲಿ ದೊಡ್ಡವನು. ವೀರನಾದರೂ ಮೃದು ಸ್ವಭಾವದವನು. ಅವನು ನಿಮ್ಮ ಕಷ್ಟಗಳನ್ನು ಪರಿಹರಿಸಿ ನಿಮಗೆ ಯೋಗ್ಯ ನಾದ ಪ್ರಭುವಾಗಬಲ್ಲನು. ಭರತನು ರಾಜಯೋಗ್ಯವಾದ ಗುಣಗಳಿಂದ ಕೂಡಿದ್ದಾನೆ. ಅವನು ನಿಮಗೆ ಯುವರಾಜನಾಗಬೇಕೆಂದು ನಿಶ್ಚಿತವಾಗಿದೆ" (ಅಯೋ. ಸ. ೪೫. ಶ್ಲೋ ೬–೯). ದೀರ್ಘಕಾಲ ಜೊತೆಯಲ್ಲಿಲ್ಲದಿದ್ದರೂ ಶ್ರೀರಾಮನು ಭರತನ ಗುಣಾತಿಶಯಗಳನ್ನು ತಿಳಿದುಕೊಂಡಿರಬೇಕಿದ್ದರೆ ಅವನ ಶೀಲ ಸಂಪತ್ತಿನ ಪ್ರಭಾವವೆಷ್ಟೆಂಬುದು ವ್ಯಕ್ತವಾಗುತ್ತದೆಯಲ್ಲವೆ ?

ಶ್ರೀರಾಮನೂ ಭರತನ ಶೀಲದಿಂದ ಎಷ್ಟು ಪ್ರಭಾವಿತನಾಗಿದ್ದಾ ನೆಂಬುದನ್ನು ವ್ಯಕ್ತಪಡಿಸುತ್ತಾನೆ. "ಅಪ್ಪ, ಲಕ್ಷ್ಮಣ, ನಮ್ಮ ಚಿಕ್ಕಮ್ಮನಾದ ಕೈಕೇಯೀ ದೇವಿಯನ್ನು ನೀನು ನಿಂದಿಸುವುದು ಎಂದಿಗೂ ತರವಲ್ಲ. ನಮ್ಮ ಇಕ್ಷ್ವಾಕು ವಂಶಕ್ಕೆ ತಿಲಕಪ್ರಾಯನಾದ ಭರತನ ಸುದ್ದಿಯನ್ನೇ ಮತ್ತೆ ಮತ್ತೆ ಆಡುತ್ತಿರು. ವನವಾಸವನ್ನು ಕ್ರಮವಾಗಿ ಮಾಡಿ ಮುಗಿಸಲೇಬೇಕೆಂದು ನಾನು ದೃಢವಾಗಿ ಸಂಕಲ್ಪಿಸಿದ್ದರೂ ಭರತನ ನೆನಪಾದೊಡನೆ ಸ್ನೇಹದಿಂದ ನನ್ನ ಸಂಕಲ್ಪವು ಶಿಥಿಲವಾಗುವುದು. ಭರತನು ಆಡಿದ ಮಾತುಗಳೆಲ್ಲವೂ ನನಗೆ ನೆನಪಾಗುತ್ತವೆ. ಎಷ್ಟು ಪ್ರಿಯವಾದ ಮಧುರ ವಚನಗಳು ! ನನ್ನ ಹೃದಯ ವನ್ನು ಸೂರೆಗೊಂಡವು. ಅಮೃತದಂತಹ ಮಾತುಗಳು. ಮನಸ್ಸಿಗೆ ಆಪ್ಯಾಯ ಮಾನವಾದ ನುಡಿಗಳು ! ಮಹಾತ್ಮನಾದ ಭರತನೊಡನೆ ನಾನು ಯಾವಾಗ

ಕಲೆತಿರುವೆನೊ" ಎಂದು ಹೇಳಿದನು (ಅರ. ಸ. ೧೬. ಶ್ಲೋ. ೨೭–೪೦). ಈರ್ವರ ಭ್ರಾತೃತ್ವವೂ ಸ್ನೇಹದ ಗದ್ದುಗೆಯನ್ನೇರಿದೆ. ಶ್ರೀರಾಮನು ಲಕ್ಷ್ಮಣನ ಶಂಕೆಗೆ ಉತ್ತರವನ್ನು ಕೊಡಲಿಲ್ಲ. ತನ್ನ ವಿಶಾಲ ಉದಾರ ಹೃದಯವನ್ನು ಪ್ರಕಟಿಸಿದ. ಭರತನು ಅಂಥ ಗುಣಶಾಲಿಯಾಗಿದ್ದರೆ ಹಡೆದ ತಾಯಿಯೂ ಅಷ್ಟೇ ಗುಣಶಾಲಿಯೆಂದೂ ಕಾರ್ಯತಂತ್ರಜ್ಞೆಯೆಂದೂ ಹೇಳಬಹುದಿತ್ತು. ಕುಟಿಲತಂತ್ರದ ಬಗೆಗೆ ಲಕ್ಷ್ಮಣನು ಮತ್ತಷ್ಟು ಆಳವಾಗಿ ಪರ್ಯಾಲೋಚಿಸುವಂತೆ ಪ್ರಚೋದನೆ ಕೊಟ್ಟಂತಾಗುತ್ತಿತ್ತು. ರಾಮಾನುಜನೂ ಭಾವಾವೇಶಪೂರಿತನಾದವನೆ. ವೈಚಾರಿಕತೆ ಅವನಿಗೂ ಹಿಡಿಸುತ್ತಿರಲಿಲ್ಲ. ಶ್ರೀರಾಮನು ಮಾತ್ರ ಭರತನ ವಾಕ್ಸರಣಿಯಿಂದ ಧರ್ಮ ಸಂಕಟಕ್ಕೆ ಸಿಕ್ಕಿಕೊಂಡಿದ್ದನು. ಅದನ್ನು ಒಪ್ಪಿಕೊಂಡು ತನ್ನ ಘನತೆಯನ್ನು ವ್ಯಕ್ತಪಡಿಸಿದ್ದಾನೆ.

ಶ್ರೀರಾಮನು ವಾಲಿಯನ್ನು ವಧಿಸಿ ಸುಗ್ರೀವನಿಗೆ ಕಿಷ್ಕಿಂಧಾರಾಜ್ಯದ ಪಟ್ಟಗಟ್ಟಿಸಿ ಚಾತುರ್ಮಾಸದ ವ್ರತಾಚರಣೆಗಾಗಿ ಪ್ರಸ್ರವಣ ಗಿರಿಯಲ್ಲಿದ್ದಾಗ ಭರತನನ್ನು ಸ್ಮರಿಸಿಕೊಳ್ಳುತ್ತಾ "ಲಕ್ಷ್ಮಣ, ಕೋಸಲೇಶ್ವರನಾದ ಭರತನು ರಾಜಕಾರ್ಯ ವಿಸ್ತರವನ್ನು ಈ ಸಮಯದಲ್ಲಿ ನಿಲ್ಲಿಸಿರಬಹುದು (ಮಳೆಗಾಲದ ವಿಜೃಂಭಣೆ). ಸಂಗ್ರಾಹ್ಯ ವಸ್ತುಗಳನ್ನು ಸೇರಿಸಿಕೊಂಡು, ಆಷಾಢ ಶುದ್ಧ ಪೂರ್ಣಿಮೆಯಿಂದ ಯಾವುದಾದದರೊಂದು ವ್ರತ ಸಂಕಲ್ಪವನ್ನು ಕೈಗೊಂಡಿರ ಬಹುದು" (ಕಿಷ್ಕಿ. ಸ. ೨೮. ಶ್ಲೋ. ೫೫–೫೬).

ಸೀತಾದೇವಿಯೂ ಭರತನಲ್ಲಿ ವಿಶ್ವಾಸವನ್ನಿಟ್ಟಿದ್ದಾಳೆ. ಅವಳು ಅಶೋಕವನದಲ್ಲಿ ಬಂಧಿತಳಾಗಿದ್ದಾಗ ರಾಮಬಂಟನು ತನ್ನ ದರ್ಶನವನ್ನು ಕೊಟ್ಟು ತಾನು ರಾಮದೂತನೆಂದಾಗ ಅವಳಿಗೆ ಆನಂದವಾಯಿತು. ತನ್ನ ಪತಿಯು ತನ್ನನ್ನು ಇಲ್ಲಿಂದ ಬಿಡಿಸುವನೆ? ಎಂದು ಹನುಮನಿಗೆ ಪ್ರಶ್ನೆ ಹಾಕುತ್ತಾಳೆ. ಅಯೋಧ್ಯೆಯ ಕುಶಲವನ್ನು ವಿಚಾರಿಸುತ್ತಾಳೆ. "ಕೌಸಲ್ಯಾ ದೇವಿ, ಸುಮಿತ್ರಾದೇವಿ, ಭರತ ಇವರ ಯೋಗಕ್ಷೇಮವೇನಾದರೂ ಕೇಳಿ ಬರು

ತ್ತಿದೆಯೆ ? ಭರತನು ಸೋದರ ವಾತ್ಸಲ್ಯವನ್ನಿಟ್ಟು ಮಂತ್ರಿಗಳಿಂದ ರಕ್ಷಿತವಾದ ಮಹಾ ಸೈನ್ಯವನ್ನು ನನಗೋಸ್ಕರ ಯುದ್ಧ ಮಾಡಲು ಕಳಿಸಿಕೊಡಬಹುದೆ ? " (ಸುಂ. ಸ. ೩೭. ಶ್ಲೋ. ೨೨–೨೪). ವನವಾಸಿಗಳ ಮತ್ತು ನಂದಿಗ್ರಾಮದ ತಪಸ್ವಿಗಳ ಸಹೋದರ ವಾತ್ಸಲ್ಯ, ಸ್ನೇಹಭಾವ, ಪರಸ್ಪರ ವಿಶ್ವಾಸ, ಪುನರ್ಮಿಲನದ ನಿರೀಕ್ಷಣಾ ತಪಸ್ಸು—ಸ್ಪರ್ಧಾತ್ಮಕವಾಗಿ ವ್ಯಕ್ತಗೊಂಡು ಅವರುಗಳ ವ್ಯಕ್ತಿತ್ವದ ಮೇಲೆ 'ಕ್ಷ' ಕಿರಣಗಳನ್ನು ಹರಿಸುವಂತಿದೆ.

ಭರತನ ವಿಚಾರದಲ್ಲಿ ಕವಿಯು ಇಷ್ಟನ್ನಾದರೂ ನಿರೂಪಿಸಿದ್ದಾನೆ. ಆದರೆ ಮಾಂಡವಿ ಶ್ರುತಕೀರ್ತಿಯರ ವಿಷಯವಾಗಿ ಚಕಾರವನ್ನೂ ಎತ್ತಿಲ್ಲ. ಪ್ರಾರಂಭದಲ್ಲಿ ಶ್ರೀರಾಮನು ಮಾಂಡವಿಯನ್ನು ಒಂದುಸಲ ಮಾತ್ರ ಜ್ಞಾಪಿಸಿ ಕೊಂಡಿದ್ದಾನೆ. ಸೀತೆಯ ಸಮಗ್ರ ವಿಚಾರವನ್ನೂ ಹೇಳಿರುವ ಕವಿ ಅವಳ ತಂಗಿಯರ ವಿಚಾರವಾಗಿ—ಅವರು ಸಹ ಧರ್ಮಚಾರಿಣಿಯರಾಗಿ ನಡೆದು ಕೊಂಡದ್ದನ್ನು—ಬಹು ಸೂಕ್ಷ್ಮವಾಗಿ ಸೂಚಿಸಬಹುದಿತ್ತಲ್ಲವೆ ? ಸೀತೆಯಿಂದ ಶ್ರೀರಾಮನಿಗೆ ಕೀರ್ತಿ ಬಂತೆಂದರೆ ಮಾಂಡವಿ ಶ್ರುತಕೀರ್ತಿಯರಿಂದ—ತಪಸ್ವಿ ಯರಾಗಿ ಸಹಧರ್ಮಚಾರಿಣಿಯರಾಗಿ ಬ್ರಹ್ಮಚಾರಿಣಿಯರಾಗಿ ಜೀವನವನ್ನು ನಡೆಸಿದ್ದರಿಂದ—ಭರತ ಶತ್ರುಘ್ನರಿಗೂ ಕೀರ್ತಿ ಬಂದಿತೆಂದು ಹೇಳಲು ಅಡ್ಡಿ ಏನು ?

## ರಾಮದೂತನು ಕಂಡ ನಿಷ್ಕಾಮ ಕರ್ಮಯೋಗಿ

ಶ್ರೀರಾಮನು ತನ್ನ ತಂದೆಗೂ ಇಂದ್ರನಿಗೂ ಋಷಿಗಳಿಗೂ ಲೋಕಕ್ಕೂ ಕಲ್ಯಾಣಕರವಾದ ಕ್ರತುವನ್ನು ಸಾಂಗವಾಗಿ ನೆರವೇರಿಸಿ ನಂಬಿದವರ, ಸಹಾಯ ಮಾಡಿದವರ ಈಪ್ಸೆಯನ್ನು ಪೂರೈಸಿ, ಸೀತಾಲಕ್ಷ್ಮಣ ವಾನರ ರಾಕ್ಷಸ ಪರಿವಾರ ಸಮೇತ ಲಂಕೆಯಿಂದ ರಾವಣನ ವಿಮಾನದಲ್ಲಿ ಬಂದು ಭರದ್ವಾಜಶ್ರಮ ದಲ್ಲಿಳಿದುಕೊಂಡು, ಭೃತ್ಯ ಆಂಜನಿ ಪುತ್ರನಾದ ಮಹಾವೀರನನ್ನು ನಂದಿ ಗ್ರಾಮಾಶ್ರಮದ ಮಹಾಮುನಿಗೆ ತಾನು ಬರುತ್ತಿರುವುದನ್ನು ತಿಳಿಸಲು ಕಳುಹಿಸಿದ. ರಾಜಭೋಗವನ್ನುಂಡ ಭರತನ ಮನಸ್ಸು ಹೇಗಿದೆ ಎಂಬುದನ್ನು ಅವನ ಮುಖಚರ್ಯೆಯಿಂದ ತಿಳಿದುಬಂದು ಹೇಳೆಂದ. ತದ್ವತ್ ಹನುಮನು ನಂದಿಗ್ರಾಮಾಶ್ರಮಕ್ಕೆ ಬಂದು ಭರತನನ್ನು ಕಂಡನು. ಭರತನು ನಾರು

ಬಟ್ಟೆಯನ್ನುಟ್ಟು ಕೃಷ್ಣಾಜಿನವನ್ನು ಹೊದೆದು ತಾಪಸ ವೇಷದಲ್ಲಿದ್ದನು. ಶ್ರೀರಾಮನ ಚಿಂತೆಯಿಂದ ದೀನನಾಗಿದ್ದನು. ದೇಹವು ಕೃಶವಾಗಿತ್ತು, ತಲೆಯಲ್ಲಿ ಜಟೆಯು ಬೆಳೆದಿತ್ತು. ಸಂಸ್ಕಾರವಿಲ್ಲದೆ ಶರೀರವು ಮಲಿನವಾಗಿತ್ತು. ಅಣ್ಣನ ವಿರಹ ವ್ಯಸನವು ಅವನನ್ನು ಕೊರೆಯುತ್ತಿತ್ತು. ಫಲ ಮೂಲಗಳನ್ನು ಮಾತ್ರವೇ ತಿನ್ನುತ್ತ ಜಿತೇಂದ್ರಿಯನಾಗಿ ಧರ್ಮನಿಷ್ಠನಾಗಿದ್ದ ಭರತನು ಒಬ್ಬ ತಪಸ್ವಿಯೇ ಆಗಿದ್ದನು. ಉನ್ನತ...ಜಟಾಭಾರವನ್ನು ಹೊತ್ತು, ವಲ್ಕಲಾಜಿನಗಳನ್ನು ಧರಿಸಿ, ನಿಯಮಪೂರ್ವಕವಾದ ಜೀವನ ವಿಧಾನವನ್ನನುಸರಿಸಿ, ಭಗವಚ್ಚಿಂತನೆಯಲ್ಲಿ ತತ್ಪರನಾಗಿದ್ದ ಭರತನ ಮುಖದಲ್ಲಿ ಬ್ರಹ್ಮರ್ಷಿ ಸಮಾನವಾದ ತೇಜಸ್ಸು ಬೆಳಗುತ್ತಿತ್ತು. ಶ್ರೀರಾಮನು ಕೊಟ್ಟಿದ್ದ ಪಾದುಕೆಗಳನ್ನು ಮುಂದಿಟ್ಟುಕೊಂಡು ಅವುಗಳ ಹೆಸರಿನಲ್ಲಿ ರಾಜ್ಯವನ್ನು ಆಳುತ್ತಿದ್ದ ಭರತನು ಚಾತುರ್ವರ್ಣ್ಯದ ಧರ್ಮಕ್ಕೆ ಲೋಪವಾಗದಂತೆ ಯಾರಿಗೂ ಯಾವ ಭಯವೂ ಸಂಭವಿಸದಂತೆ, ಪ್ರಜೆಗಳನ್ನು ಪಾಲಿಸುತ್ತಿದ್ದನು. ಶುದ್ಧಾತ್ಮರಾದ ಅಮಾತ್ಯರು, ಪುರೋಹಿತರು ಮತ್ತು ಸೇನಾಪತಿಗಳಿಂದ ಯುಕ್ತನಾಗಿ, ಭರತನು ರಾಜ್ಯರಕ್ಷಣೆಯನ್ನು ನೋಡಿಕೊಳ್ಳುತ್ತಿದ್ದನು. ಅಮಾತ್ಯಾದಿಗಳೂ ಕೂಡ ಭರತನಂತೆ ಕಾಷಾಯ ವಸ್ತ್ರಗಳನ್ನು ಧರಿಸಿ ವ್ರತನಿಷ್ಠರಾಗಿದ್ದರು. ಏಕೆಂದರೆ, ಧರ್ಮವತ್ಸಲನಾದ ರಾಜಪುತ್ರನು ವಲ್ಕಲ ಕೃಷ್ಣಾಜಿನಗಳನ್ನು ಧರಿಸಿ ನಿಯಮ ಪಾಲನೆಯಲ್ಲಿರುವಾಗ ಅವನನ್ನು ಬಿಟ್ಟು ಭೋಗವನ್ನನುಭವಿಸಲು ಅಮಾತ್ಯಾದಿ ಪೌರರಿಗೆ ಮನಸ್ಸು ಬರಲಿಲ್ಲ. ಈ ಪ್ರಕಾರವಾಗಿ, ದೇಹಧಾರಿಯಾದ ಸಾಕ್ಷಾತ್ ಧರ್ಮವೋ ಎಂಬಂತೆ ಕಾಣುತ್ತಿದ್ದ ಧರ್ಮಜ್ಞನಾದ ಭರತನನ್ನು ನೋಡಿ, ವಾಯುಪುತ್ರನಾದ ಹನುಮಂತನು ಕೈಮುಗಿದುಕೊಂಡು ಹೀಗೆಂದನು (ಯು. ಸ. ೧೨೮. ಶ್ಲೋ. ೨೭–೩೪). "ಶ್ರೀರಾಮನು ವಿಜಯಿಯಾಗಿ ಬರುತ್ತಿದ್ದಾನೆ. ನಿನ್ನ ಕುಶಲವನ್ನು ವಿಚಾರಿಸಿದ." ಹರ್ಷಾತಿರೇಕದಿಂದ ನೆಲಕ್ಕೆ ಬಿದ್ದು ಮೂರ್ಛಿತನಾದನು. ಚೇತರಿಸಿಕೊಂಡನು. ಮಾನವ ರೂಪದಲ್ಲಿದ್ದ ಹನುಮನನ್ನು ಅಪ್ಪಿಕೊಂಡನು. ಅವನ ಮೈಯೆಲ್ಲವೂ ಒದ್ದೆಯಾಯಿತು. "ನೀನು ಯಾರು ? ದೇವತೆಯೊ ಮಾನವನೊ ? ನಿನಗೆ ಯಾವ ಪಾರಿತೋಷಕವನ್ನೀಯಲಿ ? ಒಂದು ಲಕ್ಷ ಗೋವುಗಳನ್ನೂ ನೂರು ಗ್ರಾಮಗಳನ್ನೂ ಕೊಡುವೆನು. ಕುಂಡಲಾಲಂಕೃತೆಯರೂ ಸದಾಚಾರ

ಸಂಪನ್ನೆಯರೂ ಆದ ಹದಿನಾರು ಮಂದಿ ಕನ್ಯೆಯರನ್ನು ನಿನಗೆ ಮದುವೆಮಾಡಿ ಕೊಡುವೆನು! ಬಂಗಾರದ ಮೈಬಣ್ಣದ ಚಂದ್ರಮುಖಿಯರಾದ ಸುಂದರಾಂಗಿಯರನ್ನು ಕೊಡಿಸುವೆನು! ಉತ್ತಮ ಕುಲಜಾತಿ ಪ್ರಸೂತರಾಗಿ ಸರ್ವಾಭರಣ ಭೂಷಿತರಾದ ತರುಣಿಯರನ್ನು ನಿನಗೆ ಧಾರೆಯೆರೆಯುವೆನು.'' ಎಂದು ಉದ್ಗರಿಸಿದನು.

ಸಮಾಜದಲ್ಲಿ ಸ್ತ್ರೀಯರನ್ನು ಭೋಗವಸ್ತುವನ್ನಾಗಿ ಕಾಣುವುದು ಆಕಾಲದಲ್ಲೂ ಇತ್ತೆಂದು ಹೇಳುವುದಕ್ಕೆ ಅಡ್ಡಿ ಏನಿದೆ? ಭರತನ ಸ್ಥಿತಿಯನ್ನು ನೋಡಿದರೆ ವಿಕಾರ ಶರೀರಿಯಾಗಿದ್ದಿರಬೇಕು. ಕಾಮರೂಪಿಯಾದ ಮಹಾವೀರನು ಮನ್ಮಥನ ರೂಪನ್ನು ತಾಳಿ ಪ್ರತ್ಯಕ್ಷನಾಗಿರಬೇಕು!! ಪಾಪ, ಭರತ ಮಹರ್ಷಿ ರತಿಯರನ್ನು ಕಾಣಿಕೆಯನ್ನಾಗಿ ಕೊಡದೆ ಮತ್ತೇನನ್ನು ತಾನೆ ಕೊಟ್ಟು ಆ ಮಹಾ ಓಲೆಕಾರನನ್ನು ತೃಪ್ತಿಪಡಿಸಲು ಸಾಧ್ಯ!!

ಲೋಕ ಹೃದಯದ ಸಿಂಹಾಸನದಲ್ಲಿ ಕೈಕೇಯಿ ಪುತ್ರನಾದ ಭರತ ಮಹಾತ್ಮನು, ಶ್ರೀರಾಮನಿಗೆ ಪಟ್ಟಕಟ್ಟಿದನು

ಆನಂದಾತಿಶಯದಿಂದ ಹಿಗ್ಗಿಹೋದ ಭರತನು ಶತ್ರುಘ್ನನನ್ನು ಕರೆದು "ಶ್ರೀರಾಮನ ಪಟ್ಟಾಭಿಷೇಕಕ್ಕೆ ಸಕಲಸಿದ್ಧತೆಗಳನ್ನು ಮಾಡು. ಅಯೋಧ್ಯೆಯು ಉಚಿತ ರೀತಿಯಲ್ಲಿ ಶೃಂಗಾರವಾಗಲಿ" ಎಂದು ಹೇಳಿ ತಾನು ಮುಂದೆ ಹೊರಟನು. ದಶರಥನ ಅಂತಃಪುರ ಸ್ತ್ರೀಯರೆಲ್ಲರೂ ಕೌಸಲ್ಯೆಯನ್ನೂ ಸುಮಿತ್ರೆಯನ್ನೂ ಮುಂದಿಟ್ಟುಕೊಂಡು ಪಲ್ಲಕ್ಕಿ ಮುಂತಾದ ವಾಹನಗಳನ್ನೇರಿ ಹೊರಟರು. ಸಕಲ ಸ್ತ್ರೀಯರೂ ಕೈಕೇಯಿಯೊಡನೆ ನಂದಿಗ್ರಾಮಕ್ಕೆ ಬಂದು ಸೇರಿದರು. ನಂದಿಗ್ರಾಮವೇ ಅಯೋಧ್ಯೆಯಾಗಿತ್ತು. ವಿಮಾನದೊಳಕ್ಕೆ ಭರತನನ್ನು ಕರೆದುಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆಲಿಂಗಿಸಿಕೊಂಡು ಶ್ರೀರಾಮನು ಪರವಶನಾದನು. ಭರತ ಎಲ್ಲರಿಗೂ ವಂದಿಸಿ ಸುಗ್ರೀವನ ಬಳಿಗೆ ಬಂದು ಅವನನ್ನು ಆಲಿಂಗಿಸಿಕೊಂಡು "ಸುಗ್ರೀವ, ನಾವು ನಾಲ್ವರು ಅಣ್ಣತಮ್ಮಂದಿರಾಗಿದ್ದೆವು. ಈಗ ನೀನು ಐದನೆ ಸೋದರನಾಗಿ ನಮ್ಮಲ್ಲಿ ಸೇರಿದೆ, ಒಳ್ಳೆಯ ಹೃದಯದಿಂದ ಉಪಕಾರಮಾಡುವವನೇ ಮಿತ್ರ. ಅಪಕಾರವು ಶತ್ರು ಲಕ್ಷಣ" ಎಂದನು.

ಶ್ರೀರಾಮನು ಕೌಸಲ್ಯೆಯ ಮಾತು ಮೀರಿ ಕಾಡಿಗೆ ಹೋದದ್ದಕ್ಕೆ ಕ್ಷಮೆ ಕೇಳಿ ಮಾತೆಯರಿಗೆ ಗುರುಗಳಿಗೆ ವಂದಿಸಿದನು. ಆಗ ಭರತನು ಶ್ರೀರಾಮನ ಪಾದುಕೆಗಳನ್ನು ಅವನ ಪಾದಗಳಿಗೆ ತೊಡಿಸಿ "ಮಹಾರಾಜ, ನೀನು ನ್ಯಾಸವಾಗಿಟ್ಟಿದ್ದ ರಾಜ್ಯವನ್ನು ಹತ್ತರಷ್ಟು ಅಭಿವೃದ್ಧಿಗೊಳಿಸಿ ನಿನಗೆ ಸಲ್ಲಿಸುತ್ತಿದ್ದೇನೆ. ನನ್ನ ಮಾತೆಯ ನುಡಿಗೆ ಬೆಲೆಕೊಟ್ಟು ಆದರಿಸಿದ್ದಾಯಿತು... ರಾಜ್ಯದ ಈ ಭಾರವನ್ನು ನಿರ್ವಹಿಸಲು ನಾನು ಶಕ್ತನಲ್ಲ. ರಾಜ್ಯ ನಿರ್ವಹಣೆ ಬಹು ತೊಡಕಾದುದು. ಉತ್ತಮವಾದ ಪ್ರಭು ಶಕ್ತಿಯ ಬಲವಿಲ್ಲದೆ ತೊಡಕನ್ನು ಪರಿಹರಿಸಿ ರಾಜ್ಯವನ್ನು ಪಾಲಿಸುವುದು ಅಶಕ್ಯವೆಂದು ತಿಳಿಯುತ್ತೇನೆ. ಶ್ರೀರಾಮ, ನಿನ್ನ ಮಾರ್ಗವನ್ನು ತುಳಿಯಲು ನನಗೆ ಶಕ್ತಿಯಿಲ್ಲ... ಈದಿನ ನೀನು ಪಟ್ಟಾಭಿಷಿಕ್ತನಾಗುವುದನ್ನು ಜಗತ್ತು ನೋಡಬೇಕು...ಎಂದಿನವರೆಗೆ ಈ ಜ್ಯೋತಿಶ್ಚಕ್ರವು ಸುತ್ತುವುದೋ, ಎಂದಿನವರೆಗೆ ಈ ಭೂಮಿ ಇರುವುದೋ ಅಂದಿನವರೆಗೆ, ಅಣ್ಣ, ಈ ಸಮಸ್ತ ರಾಜ್ಯಕ್ಕೂ ಪ್ರಭುವಾಗಿ ಪಾಲಿಸುತ್ತಿರು" ಎಂದು ನಿವೇದಿಸಿದನು. ರಾಮನು ಹಾಗೆಯೇ ಆಗಲಿ ಎಂದ. ಈ ದೇಶಕ್ಕೆ ಭರತನ ಹೆಸರನ್ನೇ ಇಡಬೇಕೆಂದು ಸೀತಾಪತಿಗೆ ಹೊಳೆಯದಿರುವುದೆ ??

ನಂದಿಗ್ರಾಮದಿಂದ ಅಯೋಧ್ಯೆಗೆ ಹೋಗಲು ಶ್ರೀರಾಮಾದಿಗಳು ರಥವನ್ನೇರಿದರು. ಭರತನು ಅಶ್ವಗಳ ಹಗ್ಗವನ್ನು ಹಿಡಿದು ತಾನೇ ಶ್ರೀರಾಮನ ರಥವನ್ನು ನಡೆಸಿದನು, ಶತ್ರುಘ್ನನು ಶ್ವೇತ ಛತ್ರವನ್ನು ಹಿಡಿದನು. ಲಕ್ಷ್ಮಣನು ಚಾಮರವನ್ನು ಹಿಡಿದು ಶ್ರೀರಾಮನ ಶಿರಸ್ಸಿನಬಳಿ ಬೀಸುತ್ತಿದ್ದನು. ಪಟ್ಟಾಭಿಷೇಕಾನಂತರ ಶ್ರೀರಾಮನು ಲಕ್ಷ್ಮಣನನ್ನು ಯುವರಾಜನಾಗೆಂದ; ಅವನು ಅದನ್ನು ತಿರಸ್ಕರಿಸಿದ. ಪ್ರಾರಂಭದಲ್ಲೇ ಕೈಕೇಯಿಯು ಯಾಚಿಸಿದ್ದ ಯುವರಾಜ ಪದವಿಯನ್ನು ಭರತನಿಗೇ ಅನುಗ್ರಹಿಸಿದನು.

ಯುಧಾಜಿತುವಿನ ಕೋರಿಕೆಯಂತೆ ಶ್ರೀರಾಮನು ಭರತನನ್ನೂ ಅವನ ವೀರ ಪುತ್ರರಾದ ತಕ್ಷ ಪುಷ್ಕಲರನ್ನೂ ಕಳಿಸಿ ಗಂಧರ್ವ ರಾಜ್ಯವನ್ನು ಸ್ಥಾಪಿಸುವಂತೆ ತಿಳಿಸಿದನು. ತಕ್ಷಶಿಲೆ, ಪುಷ್ಕಲಾವತವೆಂಬ ಪಟ್ಟಣಗಳನ್ನು ಅವರು ನಿರ್ಮಿಸಿದರು. ಆಮೇಲೆ ಆ ಮಕ್ಕಳಿಗೆ ಅಲ್ಲಿಯೇ ಪಟ್ಟ ಕಟ್ಟಿದನು.

ಕಾಲನಿಂದ ಆಹ್ವಾನ ಬಂದಿತು. ಶ್ರೀರಾಮನ ಮಹಾಪ್ರಸ್ಥಾನದಲ್ಲಿ ಅವನ ತಮ್ಮಂದಿರೂ ರಾಮಭಕ್ತರೂ ಪಾಲ್ಗೊಂಡರು.

## ವಿಚಾರ ವೇದಿಕೆ

**ಕಾವ್ಯದ ಪ್ರಮುಖಘಟನೆಗಳು :**

ರಾಮಾಯಣ ಕಾವ್ಯವನ್ನು ಪೂರ್ಣ ದೃಷ್ಟಿಯಿಂದ ಅವಲೋಕಿಸಿದಾಗ ಕೆಲವು ಪ್ರಮುಖ ಘಟನೆಗಳನ್ನು ತೀವ್ರವಾಗಿ ಗಮನಿಸಬೇಕಾಗುತ್ತದೆ. ಅಹಲ್ಯೆಗಾದ ಸಾಕ್ಷಾತ್ಕಾರ, ವಿಶ್ವಾಮಿತ್ರರು ಶ್ರೀರಾಮನನ್ನು ಯಾಗ ರಕ್ಷಣೆಗೆ ಕರೆದುಕೊಂಡುಹೋದುದು, ಸೀತಾಕಲ್ಯಾಣ, ಕೈಕೇಯಿಗೆ ದಶರಥ ಸಲ್ಲಿಸಿದ ವರಗಳು, ಆ ಸಂದರ್ಭದಲ್ಲಿ ಭರತನ ಅನುಪಸ್ಥಿತಿ, ಶ್ರೀರಾಮನಲ್ಲಿ ಶೂರ್ಪಣಖಿಯ ಪ್ರಣಯಭಿಕ್ಷೆ, ಮಾರೀಚನ ಕಪಟ ನಾಟಕ, ಸೀತಾಪಹರಣ, ಸುಗ್ರೀವನಸಖ್ಯ ಮತ್ತು ರಾವಣಾದಿ ರಾಕ್ಷಸರ ಧ್ವಂಸ, ಅಗ್ನಿಪರೀಕ್ಷೆ, ಪಟ್ಟಾಭಿಷೇಕ. ದಶರಥನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಲು ನಿರ್ಧರಿಸಿ ಪ್ರಕಟಿಸಿದಾಗ ಭರತನು ಅಯೋಧ್ಯೆಯಲ್ಲಿ ಇಲ್ಲದಿದ್ದುದು ಬಹು ಮುಖ್ಯವಾದ ಸಂಗತಿ.

ದಶರಥನು ಭರತನ ಪೂರ್ಣ ಗುಣಗ್ರಹಣ ಮಾಡಿರಲಿಲ್ಲ. ಶ್ರೀರಾಮನ ಪಟ್ಟಾಭಿಷೇಕವನ್ನು ಘೋಷಿಸಿದಾಗ ಅದಕ್ಕೆ ಭರತನು ಲೇಶಮಾತ್ರವೂ ಅಡ್ಡಿ ಬರುತ್ತಿರಲಿಲ್ಲವೆಂಬುದು ಅವನ ನಡಾವಳಿಯಿಂದ ಪ್ರಕಟವಾಗುತ್ತದೆ. ದಶರಥನ ಮಹೇಚ್ಛೆಯಂತೆ ಇಕ್ಷ್ವಾಕುವಂಶದ ಪರಮ ಶತ್ರುವಾದ ರಾಕ್ಷಸರ ಸಂಹಾರವಾಗಬೇಕಾಗಿರುವುದು, ಕೈಕೇಯಿಗೆ ಸಲ್ಲಬೇಕಾದ ವರಗಳನ್ನು ಸಲ್ಲಿಸುವುದು, ಇಂದ್ರನು ವಿಶ್ವಾಮಿತ್ರನೆದುರು ಶ್ರೀರಾಮ ದೇವಕಾರ್ಯವನ್ನು ನಡೆಸಿಕೊಡಬೇಕೆಂದು ನೀಡಿದ ಆದೇಶವನ್ನು ಪಾಲಿಸುವುದು, ಮೇಲಾಗಿ ದಶರಥನು ಸತ್ಯಸಂಧನಾಗೇ ಉಳಿಯಬೇಕೆಂಬುದು—ಇವುಗಳೆಲ್ಲವೂ ಸಾಧಿತ ವಾಗಬೇಕಾದರೆ ಭರತನ ಅಮೂಲ್ಯ ಸಹಕಾರ ಬೇಕಾಗಿದೆಯೆಂದು ತಂದೆತಾಯಿ ಮತ್ತು ಶ್ರೀರಾಮ ಹೇಳಿದ್ದರೆ ಭರತ ಒಪ್ಪುತ್ತಿದ್ದ. ದಶರಥನಿರುವ ಪರ್ಯಂತ ಭರತ ಸಹಾಯಕನಾಗಿದ್ದ, ಆಕಸ್ಮಾತ್ ತಂದೆ ಸ್ವರ್ಗಸ್ಥನಾದರೆ,

ರಾಮನ ಪರವಾಗಿ ರಾಜ್ಯರಕ್ಷಣೆಮಾಡಿ ವನವಾಸದಿಂದ ಬಂದಮೇಲೆ ರಾಮನಿಗೆ ಪಟ್ಟಕಟ್ಟುವುದೆಂದು ಹೇಳಿದ್ದರೆ ಭರತ ಒಪ್ಪುತ್ತಿದ್ದ. ಇಲ್ಲಿ ಕಾಣಿಸಿಕೊಳ್ಳುವ ಬಹು ಮುಖ್ಯ ಪ್ರಶ್ನೆಯೆಂದರೆ ಶ್ರೀರಾಮನು ಹದಿನಾಲ್ಕು ವರ್ಷಗಳು ಮಾತ್ರವೇ ತಪಸ್ವಿಯಾಗಿ ದಂಡಕಾರಣ್ಯದಲ್ಲೇ ಏಕೆ ಇರಬೇಕು ? ಸೀತೆಯೂ ಏಕೆ ಹಿಂಬಾಲಿಸಬೇಕು ? ರಾಕ್ಷಸ ಸಂಹಾರಕ್ಕೆ ರಾಮನೇ ಏಕೆ ಹೋಗಬೇಕು ? ಶತ್ರುಸಂಹಾರಕ್ಕೆ ಸೇನಾರಹಿತನಾಗಿ ಏಕೆ ಹೋಗಬೇಕು ? ಉಳಿದ ಮೂರು ಮಂದಿ ಸಹೋದರರು ಅಯೋಧ್ಯಾಸೇನೆ ಮತ್ತು ಸಾಮಂತರಾಜರ ಸೇನಾ ಸಮೇತ ಹೋಗಿ ದಿಗ್ವಿಜಯವನ್ನು ಏಕೆ ಸಾಧಿಸಬಾರದು ? ಇವುಗಳಿಗೆ ಉತ್ತರವಾಗಿ ಮಹಾರಾಜ ಹೀಗೆ ಹೇಳಬಹುದಿತ್ತು. "ನಿನ್ನಲ್ಲಿ ಶಕ್ತಿ ಸಾಮರ್ಥ್ಯ (ಮುಖ್ಯವಾಗಿ ಜ್ಞಾನ ಧರ್ಮಶಕ್ತಿ) ರಾಮನಲ್ಲಿರುವಷ್ಟಿಲ್ಲ. ಇಂದ್ರನ ಮತ್ತು ಋಷಿಗಳ ಯೋಜನೆಯಂತೇ ನಡೆಯುವುದು ಮಾನವನ ಕರ್ತವ್ಯ. ಶ್ರೀರಾಮನು ಚಿರಕೀರ್ತಿಯನ್ನು ಗಳಿಸಿದರೆ ನಮ್ಮ ವಂಶವವರಿ ಗೆಲ್ಲಾ ಕೀರ್ತಿ ಬಂದತಲ್ಲವೆ ? ಸ್ತ್ರೀಶಕ್ತಿ ಏನೆಂಬುದನ್ನು ನೀನರಿಯೆ. ನಿನ್ನ ತಾಯಿ, ಕ್ಷತ್ರಿಯರಾಣಿ. ರಣರಂಗಕ್ಕೆ ನನ್ನನ್ನು ಹಿಂಬಾಲಿಸಿ ಬಂದು ನನ್ನ ಪ್ರಾಣರಕ್ಷಣೆ ಮಾಡಲಿಲ್ಲವೆ ? ಅಂಥ ಸ್ತ್ರೀ ಶಕ್ತಿಯ ಆವಶ್ಯಕತೆ ರಾಮನಿಗೂ ಇದೆ". ಪಿತೃವಾಕ್ಯಪರಿಪಾಲನೆ ತನ್ನ ಕರ್ತವ್ಯವೆಂದು ಭರತ ಒಪ್ಪಿಕೊಳ್ಳು ತ್ತಿದ್ದ. ಶ್ರೀರಾಮನೂ ಭರತನ ಅನುಮತಿ ಪಡೆದು ವನವಾಸಕ್ಕೆ ಹೋಗ ಬಹುದಿತ್ತು. ಆದರೂ ಹದಿನಾಲ್ಕು ವರ್ಷಗಳ ದಂಡಕಾರಣ್ಯದ ತಾಪಸ ಜೀವನಕ್ಕೆ ಸಮರ್ಪಕವಾದ ಸಮರ್ಥನೆ ದೊರೆತಂತಾಗಲಿಲ್ಲ. ಕಾವ್ಯವು ತರ್ಕ ಬದ್ಧವೂ ತರ್ಕಾತೀತವೂ ಆಗಿದೆ. ಇಲ್ಲಿ ತರ್ಕ ಇತಿಹಾಸದ ಹಾದಿಯನ್ನು ಹಿಡಿದಿದೆ ; ಸೋತಿದೆ. ಕಾವ್ಯವು ತರ್ಕಾತೀತವಾಗಬೇಕಾದ ರಸಮಯವಾಗ ಬೇಕಾದರೆ ರಾಜಕೀಯದ ಕುಟಿಲ ತಂತ್ರವನ್ನು ಕಾವ್ಯತಂತ್ರವನ್ನಾಗಿ ಪ್ರಯೋಗಿಸಬೇಕು.

ಮತ್ತೊಂದು ದೃಷ್ಟಿಯಿಂದ ನೋಡಿದಾಗ ಭರತನು ಆ ಸಂದರ್ಭವಲ್ಲಿ ರಾಜಗೃಹದಲ್ಲಿಲ್ಲದಿದ್ದರೆ ಕೈಕೇಯಿ ವರಗಳನ್ನು ಗಳಿಸಿದ್ದರೂ, ಭರತ ಯುವ ರಾಜನಾಗುತ್ತಿರಲಿಲ್ಲ. ಒಂದು ವೇಳೆ ರಾಮನಿಗೆ ಹದಿನಾಲ್ಕು ವರ್ಷಗಳು ಗಡೀಪಾರಾಗಿದ್ದರೆ ಮಿಥಿಲೆಯಲ್ಲೋ, ಕೌಸಲ್ಯೆಯ ತೌರಿನಲ್ಲೋ ಅಥವಾ

ಭರದ್ವಾಜ ಅತ್ರಿಯರ ಆಶ್ರಮದಲ್ಲೋ ಇದ್ದು ಹಿಂದಿರುಗುತ್ತಿದ್ದ. ಆಗ ರಾಮಾಯಣವೇ ಇರುತ್ತಿರಲಿಲ್ಲ. ಭರತನು ಅಯೋಧ್ಯೆಯಲ್ಲಿ ಇಲ್ಲದಿರುವುದರಿಂದ ಶ್ರೀರಾಮನ ಯುವರಾಜ ಪಟ್ಟಾಭಿಷೇಕಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ತಿಳಿದೇ ದಶರಥ ಈ ಏರ್ಪಾಡನ್ನು ಮಾಡುತ್ತಾನೆ. ಕೌಸಲ್ಯೆಯೂ ಸೀತೆಯೂ ಭರತನೂ ಅಲ್ಲದೆ ಸರ್ವರೂ 'ಭರತನಿಗೆ ಪಟ್ಟಕಟ್ಟಿದರೆ ಕಟ್ಟಲಿ, ಆದರೆ ಶ್ರೀರಾಮನೇಕೆ ವನವಾಸ ಹೋಗಬೇಕು' ಎಂದು ಪ್ರಶ್ನಿಸಿರುವುದೂ ಗಮನಾರ್ಹ.

•

ಭರತನ ಮಾತೃನಿಂದೆ ಮೂಢತನದಿಂದ ಮೂಡಿದ್ದು

ದಶರಥನ ಮರಣಾನಂತರ ಅಯೋಧ್ಯೆಯಿಂದ ದೂತರು ರಾಜಗೃಹಕ್ಕೆ ಹೋಗಿ ಭರತನನ್ನು ಕಂಡಾಗ ಅವರ ಮುಂದೆ ಅವನು ಕೈಕೇಯಿಯು "ಸ್ವಾರ್ಥಿ, ಹಠಮಾರಿ, ಕೋಪಿಷ್ಠೆ, ತಾನೇ ಬುದ್ಧಿಶಾಲಿಯೆಂದು ತಿಳಿದುಕೊಂಡಿದ್ದಾಳೆ" ಎಂದು ನಿಂದಿಸಿದ. ಸೇವಕರ ಮುಂದೆ ರಾಜಕುಮಾರ ತಾಯಿಯಾದ ರಾಣಿಯನ್ನು ನಿಂದಿಸಬಹುದೆ ? ಶತಾಪರಾಧ ಮಾಡಿದರೂ ತಾಯಿ ತಾಯಿಯಲ್ಲವೆ ? ಅರಮನೆಗೆ ಬಂದ್ಮೇಲೆ ತಾಯಿಯನ್ನು ಭೇಟಿಮಾಡಿ ನಡೆದ ಸಂಗತಿಗಳನ್ನು ತಿಳಿದುಕೊಂಡ. ಕುಲನಾಶಿನಿ, ಪತಿಯನ್ನು ಕೊಂದವಳು, ಸವತಿಯರಿಗೂ ತನಗೂ ವೈಧವ್ಯವನ್ನು ತಂದುಕೊಂಡವಳು, ಶೀಲಭ್ರಷ್ಟೆ, ಘಾತಕಿ, ಪಾಪಿಯೆಂದು ಕಟುವಾಗಿ ದೂಷಿಸಿದ. ಆಮೇಲೆ ಭರದ್ವಾಜಾಶ್ರಮದಲ್ಲಿ ಅವಳನ್ನು ಮಹರ್ಷಿಗಳಿಗೆ ಪರಿಚಯ ಮಾಡಿಕೊಡುವಾಗ 'ಸಿಡುಕಿ, ಅವಿವೇಕಿ, ದುರಹಂಕಾರಿ, ತಾನೇ ಸುಂದರಿ ಎಂದು ತಿಳಿದುಕೊಂಡಿರುವವಳು. ದುಷ್ಟಳಾದರೂ ಒಳ್ಳೆಯವಳಂತೆ ನಟಿಸುತ್ತಾಳೆ, ಕಠೋರ ಹೃದಯಳು' ಎಂದು ತೆಗಳುತ್ತಾನೆ. ವಧಾರ್ಹಳೆಂದೇ ಹೇಳುತ್ತಾನೆ. ಚಿತ್ರಕೂಟದಲ್ಲಿ ಶ್ರೀರಾಮನ ಮುಂದೆಯೂ ಇದೇ ಧ್ವನಿಯಲ್ಲಿ ಸಂಭಾಷಣೆ ಮಾಡುತ್ತಾನೆ. ಭ್ರಾತೃವಾತ್ಸಲ್ಯಾಧಿಕ್ಯದಿಂದ ಮಾತೃ ನಿಂದನೆಯನ್ನು ವಿನಾ ಕಾರಣ ಮಾಡಿದ್ದನ್ನರಿತು ಶ್ರೀರಾಮನು ಭರತನಿಗೆ ಹೀಗೆ ಬೋಧಿಸುತ್ತಾನೆ. "ಕೈಕೇಯಿಯನ್ನು ಗೌರವದಿಂದ ಕಾಣು. ನನ್ನ ಆಣೆ, ಸೀತೆಯ ಆಣೆ" ಎಂದು. ಶ್ರೀರಾಮನ ಬಾಯಿಯಲ್ಲಿ ಎಂದೂಬಾರದ ಆಣೆ ಇದ್ದು, ಸಂಸ್ಕೃತಿ

ವಂತರಾದ ಯಾರಾದರೂ ಮಾತ್ಯನಿಂದೆಮಾಡಿದ್ದು ಅಪರಾಧವಾಯಿತು, ಕ್ಷಮಿಸೆಂದು ಆಗ ರಾಮನಲ್ಲಿ ಬೇಡಿಕೊಳ್ಳಬೇಕಿತ್ತು. ಇಲ್ಲಿ ಸದ್ಗುಣಾತಿಶಯವೇ, ಸೋದರ ಸ್ನೇಹವೇ ದೋಷವಾಗಿ ಪರಿಣಮಿಸಿದೆ ಅಲ್ಲವೆ ?

## ಮಕ್ಕಳ ಮೌಢ್ಯಕ್ಕೆ ಮಾತಾಪಿತರೇ ಕಾರಣರು

ಭರತನ ಹತ್ತುಹದಿನೈದು ವರ್ಷಗಳ ಬಾಲ್ಯಾವಸ್ಥೆಯಲ್ಲಿ ಅಯೋಧ್ಯೆಯಲ್ಲಿ ಎಷ್ಟು ಕಾಲವಿದ್ದನೊ, ರಾಜಗೃಹದಲ್ಲಿ ಎಷ್ಟು ಕಾಲ ಇದ್ದನೊ ತಿಳಿಯಲೊಲ್ಲದು. ಅವನು ಅಯೋಧ್ಯೆಯ ವಾಸ್ತವ್ಯವು ಮಾತಾಪಿತರನ್ನು ಅರಿತುಕೊಳ್ಳುವುದಕ್ಕೂ ಅವರು ಮಗನ ಗುಣಗ್ರಹಣ ಮಾಡಲಿಕ್ಕೂ ಸಾಕಾಗಲಿಲ್ಲವೆಂದು ಹೇಳಬಹುದು. ಬಂಧುಬಳಗದವರ, ಸೇವಕ, ಸ್ನೇಹಿತರ ಗುಣಗ್ರಹಣ ಮಾಡುವ ಸಮಯದಲ್ಲಿ ಹನ್ನೆರಡು ವರ್ಷಗಳ ರಾಜಗೃಹವಾಸ. ಅಲ್ಲಿ ವಿನೋದವಾಗಿ ದಾಂಪತ್ಯಜೀವನವನ್ನು ನಡೆಸಲು ಸದವಕಾಶ ಸಿಕ್ಕಿತು. ಅದಾದ ಮೇಲೆ ಹದಿನಾಲ್ಕು ವರ್ಷಗಳು ನಂದಿಗ್ರಾಮದಲ್ಲಿ ರಾಜಯೋಗಿ. ತಾಯಿಯ ನಡೆನುಡಿಗಳ ಪರಿಚಯ ಎಷ್ಟರಮಟ್ಟಿಗಾಯಿತೊ ತಿಳಿಯದು. ಭ್ರಾತೃವಾತ್ಸಲ್ಯದ ಹೆಚ್ಚಳದಿಂದ ವೈಚಾರಿಕತೆಗೆ ಅವನ ಮನ ಎಡೆಗೊಡಲಿಲ್ಲ.

ವನವಾಸಕ್ಕೆ ಹೋದವರ, ಅದರಲ್ಲೂ ಸುಕುಮಾರಿಯೂ ಕೋಮಲೆಯೂ ಆದ ಮೈಥಿಲಿಯು ಅನುಭವಿಸುವ ಕಷ್ಟಗಳನ್ನು ತನ್ನಿನಿಯಳ ಬದುಕಿನ ಹಿನ್ನೆಲೆಯಲ್ಲಿ ಪರಿಭಾವಿಸಿ ಅದಕ್ಕೆ ಕಾರಳಾದ ತಾಯಿಯ ಮೇಲೆ ಭರತನಿಗೆ ಮತ್ತಷ್ಟು ಜುಗುಪ್ಸೆ ಹುಟ್ಟಿರಬೇಕು. ಶ್ರೀರಾಮ ಲಕ್ಷ್ಮಣರು ಅನುಭವಿಸುತ್ತಿರುವ ಕಷ್ಟಕೋಟಲೆಗಳನ್ನೂ, ಅರಮನೆ ನಂದಿಗ್ರಾಮದಲ್ಲಿ ನಡೆಯುತ್ತಿರುವ ನಿತ್ಯ ಬಾಳನ್ನೂ ನೆನೆಸಿಕೊಂಡು ತನ್ನ ಬದುಕಿನಲ್ಲಿ ಶಾಂತಿಯನ್ನು ಕಾಣದೆ ಶ್ರೀರಾಮನ ಪಟ್ಟಾಭಿಷೇಕದ ಪರ್ಯಂತ ಭಾವೋದ್ರಿಕ್ತನಾಗಿಯೇ ಉಳಿದ. ತಮ್ಮ ದಾಂಪತ್ಯ ಜೀವನದಿಂದ ಜನಿಸಬಹುದಾದ ಆನಂದವನ್ನೂ ಕೈಕೇಯಿ ತೊಡೆದಳಲ್ಲ ?? ಏನು ಕಾರಣ ?

ರಾಮಾಗಮನವಾಯಿತು. ಹರ್ಷೋನ್ಮತ್ತನಾದ. ಶತ್ರುಘ್ನನಿಗೆ ಪಟ್ಟಾಭಿಷೇಕದ ವ್ಯವಸ್ಥೆ ಮಾಡೆಂದು ಆಜ್ಞಾಪಿಸಿ ಅಣ್ಣನ ದರ್ಶನಕ್ಕೆ ಹೊರಟ.

ಕೌಸಲ್ಯೆ ಸುಮಿತ್ರೆಯರು ತಮ್ಮ ಮಕ್ಕಳು ಸೊಸೆಯಂದಿರು ಬದುಕಿಬಂದರೆಂದು ಆತುರವಾಗಿ ಮುಂದೆ ಹೋದರು, ಕೈಕೇಯಿ ಸಕಲ ಸ್ತ್ರೀಯರ ಸಮೇತ ರಾಮದರ್ಶನಕ್ಕೆ ಹೋದಳು. ಕೈಕೇಯಿಯು ಹಿಂದೆ ನಡೆದು ಬರಲು ಕಾರಣ ವೆಂದರೆ ಭರತನು ಕೌಸಲ್ಯೆ ಸುಮಿತ್ರೆಯರನ್ನು ಕರೆದನೇ ವಿನಃ ಸ್ವಂತ ತಾಯಿ ಯನ್ನು ಕರೆಯದಿದ್ದುದು ಎಂದು ಹೇಳುವುದುಂಟು. ಇದು ಸರಿಯಲ್ಲ. ಭರತ ತಾನಾಗಿ ಯಾರನ್ನೂ ಆಹ್ವಾನಿಸಲಿಲ್ಲ. , ಯಾರು ಯಾರನ್ನು ಕರೆಯ ದಿದ್ದರೂ ಸರ್ವರೂ ಸಂತೋಷಾತಿಶಯದಿಂದ ಬರುವ ಸಂದರ್ಭವದು. ಭರತನ ಆಣತಿಯಂತೆ ಶತ್ರುಘ್ನನು ಭೇದಭಾವವಿಲ್ಲದೆ ಕೈಕೇಯಿಗೂ ಹೇಳಿ ದ್ದಾನೆ. ರಾಮಾಯಣದ ಟೀಕಾಕಾರರಾದ ಗೋವಿಂದರಾಜರೂ ಭರತನು ಕೈಕೇಯಿಯನ್ನು ಕರೆಯಲಿಲ್ಲವೆಂದು ಹೇಳುವುದು ಅಷ್ಟು ಸಮರ್ಪಕವಾಗಿಲ್ಲ. ಕೌಸಲ್ಯೆ ಸುಮಿತ್ರೆಯರು ರಾಣಿಯರಾಗೇ ಹೋದರು. ಕೈಕೇಯಿ ದಶರಥನ ಶಾಪ ನಿಮಿತ್ತದಿಂದ ಅವಳು ಆಗ ರಾಣಿಯಲ್ಲ. ಜತೆಯಲ್ಲಿ ಹೋಗದೆ ಪತಿಯಾಜ್ಞೆಯನ್ನು ಗೌರವಿಸಿದಳು. ಸವತಿ ಮಾತ್ಸರ್ಯದಿಂದ ಜತೆಗೂಡಲಿಲ್ಲ ವೆಂದು ಹೇಳುವುದೂ ಯುಕ್ತವಲ್ಲ. ಈ ಧಾಟಿಯಲ್ಲಿ ಭರತ ಆಲೋಚಿಸಿ ನಡೆದು ಕೃತಕೃತ್ಯನಾಗಬಹುದಿತ್ತಲ್ಲವೆ ?*

ತಾನು ತಾಯಿಯನ್ನು ನಿಂದಿಸಿದ್ದು ತಪ್ಪೆಂದು ತಿಳಿದುಕೊಳ್ಳಲು ಪ್ರಯತ್ನಿಸಲಿಲ್ಲವೆಂದೇ ಕಾಣುತ್ತದೆ. ಲಕ್ಷ್ಮಣನು ಆಪಾದಿಸಿದ 'ಕುಟಿಲ ತಂತ್ರ' ಕೈಕೇಯಿ ಹೇಳಿದ 'ಕಾರ್ಯ ತಂತ್ರ' ಇವುಗಳ ರಹಸ್ಯ ಸ್ಫೋಟ ಮಾಡಿದ್ದರೆ ಸತ್ಯಾಂಶವು ಹೊರಬಿದ್ದು ಮಾತೆಯ ಮಹತ್ವವನ್ನರಿಯುತ್ತಿದ್ದ. ಹೋಗಲಿ ; ಅಣ್ಣನ ಬುದ್ಧಿವಾದವನ್ನಾದರೂ ಗಮನಿಸಿ ನಡೆದನೆ ? ಇಲ್ಲ. ಶ್ರೀರಾಮನೇ ನಡೆದು ತೋರಿಸಿದ್ದಾನೆ. ವನವಾಸಕ್ಕೆ ಹೊರಡುವಾಗ ಕೌಸಲ್ಯೆಯ ವಚನ ಗಳನ್ನು ಉಲ್ಲಂಘಿಸಿ ಕಾಡಿಗೆ ಹೋದ. ಹಿಂದಿರುಗಿ ಬಂದಾಗ ತಾಯಿಗೆ ವಂದಿಸುತ್ತಾ 'ಅಮ್ಮ, ನಿನ್ನ ಮಾತನ್ನು ಮೀರಿ ವನವಾಸಕ್ಕೆ ಹೋದುದನ್ನು ಕ್ಷಮಿಸು' ಎಂದು ಪ್ರಾರ್ಥಿಸುತ್ತಾನೆ. ತದ್ವತ್ ಭರತನು, "ಅಮ್ಮ, ನಿನ್ನ

---

* ಓದುಗರು ದಶರಥ ಮತ್ತು ಕೈಕೇಯಿ ಪಾತ್ರಗಳನ್ನು ಒಟ್ಟಿಗೆ ಓದಿದರೆ ಸ್ವಾರಸ್ಯಕರ ವೆನಿಸುತ್ತದೆ.

'ಕಾರ್ಯತಂತ್ರ'ವನ್ನರಿಯದೆ, ನಿಜಗುಣಗ್ರಹಣಮಾಡದೆ ನಿನ್ನನ್ನು ಎಲ್ಲರೆದುರಿಗೂ ಕ್ರೂರವಾಗಿ ನಿಂದಿಸಿದೆ. ಕುಪುತ್ರರಿರಬಹುದು. ಕುಮಾತೆಯರು ಇರುವರೆ? ಕೃಪೆದೋರಿ ಮನ್ನಿಸೆನ್ನ" ಎಂದು ರಾಮದರ್ಶನಕ್ಕೆ ಹೊರಡುವ ಮುನ್ನ ತಾಯಿಯ ಬಳಿ ಸ್ವತಃ ಹೋಗಿ ಆಹ್ವಾನಿಸಿ ಕ್ಷಮೆ ಬೇಡಿದ್ದರೆ ಶ್ರೀರಾಮನ ಹೆಗಲೆತ್ತರ ಬರುತ್ತಿದ್ದ. ಹಾಗೆ ಮಾಡದಿರಲು ಕಾರಣವೇನು?

## ವೈಚಾರಿಕತೆಯ ಅಭಾವ

ಶ್ರೀರಾಮನು ಹದಿನಾಲ್ಕು ವರ್ಷಗಳು ಜಟಾಜೂಟಧಾರಿಯಾಗಿ ತಾಪಸಿಯಾಗಿ ದಂಡಕಾರಣ್ಯದಲ್ಲೇ ವನವಾಸ ಮಾಡಬೇಕೆಂದು ಕೈಕೇಯಿಯು ಏಕೆ ಪಟ್ಟು ಹಿಡಿದಳು? ಎಂದು ಪ್ರಶ್ನಿಸಿದ್ದಾನೆ. ಆದರೆ ಅದರ ರಹಸ್ಯವನ್ನು ತಿಳಿಯಲು ಯಾವ ರೀತಿಯಲ್ಲೂ ಶ್ರಮಿಸಲಿಲ್ಲ. ರಾಜಗೃಹದಿಂದ ಬಂದು ತಾಯಿಯನ್ನು ಭೇಟಿ ಮಾಡಿದಾಗ ಶ್ರೀರಾಮನಿಗೆ ವನವಾಸ ವಿಧಿಸಿದ್ದರ ಗುಟ್ಟನ್ನು ಹೇಳೆಂದು ಸಮಾಧಾನದಿಂದ ಕೇಳಬಹುದಿತ್ತು. ಭರತನು ತೀವ್ರವಾಗಿ ವಿಚಾರಪರನಾಗಲು ಸಾಕಷ್ಟು ಸಾಮಗ್ರಿಯು ಸಿಕ್ಕಿತ್ತು. ತಾಯಿಯಲ್ಲಿ ಅಷ್ಟು ಮೋಹಿತನಾಗಿದ್ದ ತಂದೆಯು ಪಟ್ಟಾಭಿಷೇಕವನ್ನು ಘೋಷಿಸುವ ವರೆಗೆ ಅವಳಿಗೇಕೆ ತಿಳಿಸಲಿಲ್ಲ? ಆ ಸುದ್ದಿಯು ಮಂಥರೆಯಿಂದಲೇ ತಾಯಿಗೆ ತಿಳಿಯಬೇಕೆ? ಹದಿನಾಲ್ಕು ವರ್ಷಗಳ ವನವಾಸವನ್ನೇ ಏಕೆ ಕೇಳಿದಳು. ಪ್ರಾಣಾಂತ ಗಡಿಪಾರನ್ನೇ ಏಕೆ ವಿಧಿಸಲಿಲ್ಲ. ದಂಡಕಾರಣ್ಯದಲ್ಲಿ ರಾಕ್ಷಸರಿಂದ ಸೀತಾರಾಮ ಲಕ್ಷ್ಮಣರು ಹತರಾಗುತ್ತಾರೆಂದು ದಶರಥ ತಿಳಿದಿದ್ದರೆ ಖಂಡಿತವಾಗಿ ಆ ವರವನ್ನು—ವಚನಭ್ರಷ್ಟನಾದರೂ ಸಲ್ಲಿಸುತ್ತಿರಲಿಲ್ಲ! ತಾಯಿಯೂ ಅದನ್ನು ಅಪೇಕ್ಷಿಸಿರಲಾರಳು. ಪ್ರಜೆಗಳಿಗೆ ಹಾಗಾಗುವುದೆಂದು ತಿಳಿದಿದ್ದರೆ ರಾಜ್ಯದಲ್ಲಿ ಮಹಾ ಕ್ಷೋಭೆಯನ್ನೆ ಸೃಷ್ಟಿಸುತ್ತಿದ್ದರು. ಚಿಂತನಕ್ಕೆ ಈ ಗ್ರಾಸ ಸಾಕಲ್ಲವೆ? ಚಿತ್ರಕೂಟಕ್ಕೆ ಹೊರಡುವ ಪರ್ಯಂತ ಸಿಕ್ಕಿದ ಕಾಲಾವಕಾಶದಲ್ಲಿ ತಾಯಿಯಂಕದಲ್ಲಿ ತಲೆಯನಿರಿಸಿ ಕಂಬನಿಯಿಂದ ಅವಳ ತೊಡೆಗಳನ್ನು ತೋಯಿಸುತ್ತ 'ಗುಟ್ಟನ್ನು ರಟ್ಟುಮಾಡು, ನಿನ್ನ ಇಚ್ಛೆಯನ್ನು ಪೂರೈಸುತ್ತೇನೆ' ಎಂದು ಬಲವಂತ ಪಡಿಸಬಹುದಿತ್ತು. ಕೌಸಲ್ಯೆಯನ್ನು ಭೇಟಿಮಾಡಿದಾಗ ಲಕ್ಷ್ಮಣನು ಕೇಳಿದ 'ಕುಟಿಲತಂತ್ರ'ದ

ವಿಚಾರವನ್ನು ಅವಳಿಂದ ತಿಳಿದು ನಿಜಾಂಶವನ್ನು ಹೇಳೆಂದು ಅವಳನ್ನಾದರೂ ಪೀಡಿಸಬಹುದಿತ್ತು. ರಾಮಾನುಜನು ಹಾಗೆ ಹೇಳಿದ್ದರಲ್ಲಿ ಸತ್ಯವಿದೆ ಎಂದು ಭರತನು ಗ್ರಹಿಸುವ ಅವಶ್ಯಕತೆ ಇತ್ತು. ಕಾರಣ ಅವನು ತನ್ನ ಆಯುಸ್ಸನ್ನೆಲ್ಲಾ—ವನವಾಸ ಪರ್ಯಂತ ಮತ್ತು ಅರಮನೆಯಲ್ಲಿ ಶ್ರೀರಾಮನ ಬಳಿಯೇ ಕಾಲ ಕಳೆದಿದ್ದಾನೆ ಮತ್ತು ಅರಮನೆಯ ಘಟನಾವಳಿಗಳನ್ನೂ ಅವುಗಳ ನಿಮಿತ್ತವನ್ನು ಅರಿತಿರುವುದು ಸಾಧ್ಯ. ಚಿತ್ರಕೂಟಕ್ಕೆ ಹೊರಟು ಶ್ರೀರಾಮದರ್ಶನ ಪರ್ಯಂತ ವಸಿಷ್ಠರನ್ನೂ ಸುಮಂತ್ರನನ್ನೂ 'ನಿಜಾಂಶವನ್ನು ತಿಳಿಸಿರಿ' ಎಂದು ಕಾಡಿದ್ದರೆ 'ರಾಜತಂತ್ರ'ದ ಇಣುಕು ನೋಟವನ್ನು ಕಾಣಬಹುದಿತ್ತು. ಎಲ್ಲಕ್ಕಿಂತಲೂ ಋಷಿವಾಣಿಯು ಪ್ರಮಾಣವಾದುದು. ಭರದ್ವಾಜರು 'ಕೈಕೇಯಿಯ ಕೃತಿಯಿಂದ ಪರಿಣಾಮದಲ್ಲಿ ಲೋಕ ಕಲ್ಯಾಣವಾಗುತ್ತದೆ' ಎಂದು ಹೇಳಿದ್ದು ಭರತನಿಗೆ ಅಚ್ಚರಿಯನ್ನುಂಟುಮಾಡಿ ತೀವ್ರಾಲೋಚನೆಗೆ ಎಡೆಮಾಡಿ ಕೊಟ್ಟಿತ್ತು. ಇದಾದ ಮೇಲೆ ರಾಮನ ಸಂದರ್ಶನ ಕಾಲದಲ್ಲಿ, 'ರಾಮನ ಕಾರ್ಯಕ್ಕೆ ಅಡ್ಡಿಮಾಡಬೇಡ, ಹಿಂದಿರುಗು' ಎಂದು ಆಕಾಶವಾಣಿಯಾದದ್ದನ್ನಾದರೂ ಗಮನಿಸಬೇಕಿತ್ತು. 'ಕುಟಿಲ ತಂತ್ರದ' ವಿಷಯಕ್ಕೆ 'ತಾಯಿ'ಯಾದ ಲಕ್ಷ್ಮಣನನ್ನು ಚಿತ್ರಕೂಟದಲ್ಲಿ ಸಂದರ್ಶಿಸಿ ದೀರ್ಘವಾಗಿ ಚರ್ಚಿಸಿ ವಾದಿಸಿ ಅದರ ನಿಜಾಂಶವನ್ನು ತಿಳಿಯಬಹುದಿತ್ತು. ಇದೊಂದು ಭರತನ ಪ್ರಮಾದವೇ ಸರಿ. ಶ್ರೀರಾಮನು ತಮ್ಮನನ್ನು ನೋಡಿದ ತಕ್ಷಣವೇ ರಾಜನೀತಿಯನ್ನು ಬೋಧಿಸಿದನು. ಕಾರಣ ಅವನಿಗೆ ಅದರ ಅರಿವಿಲ್ಲ, ಅನುಭವವಿಲ್ಲ. ರಾಜ್ಯ ರಕ್ಷಣೆಯು ಅವನ ಮೇಲೆ ಬಿದ್ದಿದೆ, ತಿಳಿಯದೆ ದುರಾಡಳಿತಮಾಡಿ ಇಕ್ಷ್ವಾಕು ವಂಶಕ್ಕೆ ಅಪಕೀರ್ತಿಯನ್ನು ತಂದಾನೆಂದು ರಾಮನಿಗೆ ಕಳವಳ. ಆಗಲೂ ಶ್ರೀರಾಮನು ವನವಾಸದಿಂದ ಬಂದು ಪಟ್ಟಾಭಿಷಿಕ್ತನಾಗಲೆಂದೇ ಕೈಕೇಯಿಯು ದಶರಥನಿಂದ ವರವನ್ನು ಪಡೆದದ್ದು ಎಂದು ಹೇಳಿದಾಗ, ವನವಾಸದ ರಹಸ್ಯ ಅಥವಾ ರಾಜ ತಂತ್ರವನ್ನು ತಿಳಿಸೆನ್ನಬಹುದಿತ್ತು. ಆಮೇಲಾದರೂ ಅದರ ಬಗೆಗೆ ಚಿಂತನೆಮಾಡಿ ತಾಯಿ ಮಾಡಿದ ಕಾರ್ಯತಂತ್ರವನ್ನು ಅರಿತಿದ್ದರೆ ಖಂಡಿತವಾಗಿ ತಾಯಿಯ ಮುಂದೆ, ರಾಮನು ಮಾಡಿದಂತೆ ತಪ್ಪೊಪ್ಪಿಕೊಳ್ಳುತ್ತಿದ್ದ. ಕವಿಯು ತನ್ನ ಕಲಾಕೌಶಲವನ್ನು ಭರತನ ಪಾತ್ರ ನಿರೂಪಣೆಯಲ್ಲಿ ವ್ಯಕ್ತಪಡಿಸಿದ್ದಾನೆ.

ಕಾವ್ಯದ ಪಾತ್ರಗಳೆಲ್ಲಾ ಸೀತಾರಾಮರಂತಿರಬೇಕೆಂಬ ಗುರಿಯಿಲ್ಲ. ಭಿನ್ನ ಭಿನ್ನ ವ್ಯಕ್ತಿತ್ವವನ್ನು ಕಂಡರಿಸುವುದೇ ಅವನ ಕಾವ್ಯಧ್ಯೇಯ. ಈ ಮೊದಲೇ ಕವಿಯು ಲಕ್ಷ್ಮಣನ ಬಾಯಿಯಿಂದ ಹೇಳಿಸಿ ಬಿಟ್ಟಿದ್ದಾನೆ 'ಜಗತ್ತಿನಲ್ಲಿ, ಜಗನ್ಮಾನ್ಯರಾಗಿದ್ದರೂ, ತಮ್ಮ ತಪ್ಪನ್ನು ಒಪ್ಪಿಕೊಂಡವರು ಮತ್ತು ಕ್ಷಮೆ ಕೇಳಿದವರು ಶ್ರೀರಾಮ ಸುಗ್ರೀವರಿಬ್ಬರೇ" ಎಂದು. ಪ್ರಾಯಶಃ ಈ ದೃಷ್ಟಿಯಿಂದಲೇ ಕೈಕೇಯಿಯನ್ನು ನಿಂದಿಸುತ್ತಿದ್ದ ಲಕ್ಷ್ಮಣನು ಅಯೋಧ್ಯೆಗೆ ಬಂದು ತಾಯಂದಿರನ್ನು ವಂದಿಸುವಾಗ ಕೈಕೇಯಿಯ ಬಳಿಗೆ ಬಂದು ಕ್ಷಮೆ ಕೇಳಲಿಲ್ಲ. ಹಾಗೆ ಮಾಡಿದ್ದರೆ ಲಕ್ಷ್ಮಣ ಭರತರು ರಾಮನ ವ್ಯಕ್ತಿತ್ವಕ್ಕೆ ಪೈಪೋಟಿ ಹೂಡಿದಂತಾಗುತ್ತಿತ್ತು. (ಈ ಕುಟಿಲ ತಂತ್ರದ ಬಗೆಗೆ ದಶರಥನ ಪಾತ್ರ ನಿರೂಪಣೆಯಲ್ಲಿ ನೋಡಿ).

### ಪ್ರಜ್ವಲಿಸುವ ಪ್ರಾಮಾಣಿಕತೆ ಶಂಕಾಸ್ಪದವಾಗಬಹುದೆ ?

ಪ್ರಾಮಾಣಿಕತೆಯು ಆತ್ಮವಂಚನೆಗೆ ಮದ್ದು. ಅದು ಲೌಕಿಕ ಪಾರಮಾರ್ಥಿಕ ಕ್ಷೇತ್ರಗಳಲ್ಲಿ ವಿಶ್ವಾಸವನ್ನು ಗಳಿಸಿಕೊಡುವ ಅಯಸ್ಕಾಂತ. ಭರತನ ಪ್ರಾಮಾಣಿಕತೆ ಅತಿ ಎಂಬಂತಿತ್ತು. "ಭರತನು ಅರಮನೆಯಲ್ಲಿದ್ದಿದ್ದರೆ ಶ್ರೀರಾಮನ ಪಟ್ಟಾಭಿಷೇಕಕ್ಕೆ ಭಂಗವುಂಟಾಗುತ್ತದೆ ಎಂದು ಅವನಿಲ್ಲದಾಗ ಶುಭಕಾರ್ಯಕ್ಕೆ ಕೈಹಾಕಿದ್ದೇನೆ" ಎನ್ನುತ್ತಾನೆ ದಶರಥ. ಆ ಸಂದರ್ಭದಲ್ಲಿ ಮಗನಿದ್ದರೆ ಶ್ರೀರಾಮನ ಪಟ್ಟಾಭಿಷೇಕಕ್ಕೆ ಪ್ರೋತ್ಸಾಹ ನೀಡುವನೆಂಬ ಭಯ ಕೈಕೇಯಿಗೂ ಇದ್ದಿರಬಹುದು. ಗುಹನಂತೂ ಭರತನು ಭರದ್ವಾಜಾಶ್ರಮಕ್ಕೆ ಹೋಗಿ ಹಿಂದಿರುಗುವ ಪರ್ಯಂತ ತನ್ನ ಪಡೆ ಸಮೇತ ಎಚ್ಚರವಾಗಿಯೇ ಇದ್ದ. ತನ್ನ ಶಂಕೆಯನ್ನು ನೀಗಿಕೊಂಡು ಭರತನ ಪ್ರಾಮಾಣಿಕತೆಯನ್ನು ಅದ್ಭುತವಾಗಿ ಪ್ರಶಂಸಿಸಿದ. ಚಿತ್ರಕೂಟದ ಪ್ರಸಂಗದಲ್ಲಿ ಭ್ರಾತೃವಾತ್ಸಲ್ಯದ ಜ್ಯೋತಿ ದಿಗಂತದಲ್ಲಿ ಬೆಳಗುತ್ತಿದ್ದಾಗ ಲಕ್ಷ್ಮಣ, "ಭರತನು ಸೇನಾಸಮೇತ ನಮ್ಮನ್ನು ನಿರ್ಮೂಲಮಾಡಲು ಬರುತ್ತಿದ್ದಾನೆ, ಅಪ್ಪಣೆಕೊಡು ಅವನನ್ನು ಧ್ವಂಸ ಮಾಡುತ್ತೇನೆ" ಎಂದು ಅಣ್ಣನನ್ನು ಎಚ್ಚರಿಸುತ್ತಾನೆ. ಶ್ರೀರಾಮನು ಭರತನ ಸದ್ಗುಣಗಳನ್ನು ವರ್ಣಿಸಿ ಮಧುರ ವಚನಗಳ ಅಂಕುಶಕ್ಕೆ ಮಣಿಯು ಮಂತೆ ಮಾಡುತ್ತಾನೆ. ಈ ಮುಂದೆ ಮಹರ್ಷಿ ಭರದ್ವಾಜರ ದರ್ಶನ ಮಾಡಿ

ದಾಗ ಅವರಿಗೂ ಭರತನ ಪ್ರಾಮಾಣಿಕತೆಯಲ್ಲಿ ಅಪನಂಬಿಕೆ. ಅವನನ್ನು ಪರೀಕ್ಷೆಗೀಡುಮಾಡಿ ಇಂದ್ರಭೋಗದ ಪ್ರಲೋಭನವನ್ನೊಡ್ಡಿ ಅದನ್ನು ಅವನು ಗೆದ್ದಮೇಲೆ ಅವನಲ್ಲಿ ವಿಶ್ವಾಸ ಮೂಡಿತು. ಅವನು ಶ್ರೀರಾಮನನ್ನು ವನವಾಸದಿಂದ ಹಿಂದಿರುಗಿಸಿ ಪಟ್ಟಾಭಿಷೇಕ ಮಾಡುವುದಕ್ಕೆ ಪ್ರಯಾಣ ಬೆಳೆಸುತ್ತಿದ್ದಾನೆಂದು ಸಂತೋಷಪಟ್ಟರು. ತಾನೂ ಶ್ರೀರಾಮನಂತೆ ತಾಪಸನಾಗಿರುವೆನೆಂದು ಅವರ ಮುಂದೆ ಪ್ರತಿಜ್ಞೆಮಾಡಿ ಚಿತ್ರಕೂಟದಲ್ಲಿ ಕಾರ್ಯತಃ ಮಾಡಿ ತೋರಿಸಿದ. ಯಾರಿಗಿಲ್ಲದಿದ್ದರೂ ಕೌಸಲ್ಯಾದೇವಿಗೆ ಭರತನ ಚಿತ್ತಶುದ್ಧಿ—ತ್ರಿಕರಣಶುದ್ಧಿಯ ಬಗ್ಗೆ ಶಂಕೆಯಿರುವುದು ಸ್ವಾಭಾವಿಕವೇ ಸರಿ. ಅದರಿಂದ ಪ್ರಚೋದಿತಳಾಗಿ ಮಾರ್ಮಿಕವಾದ ನುಡಿಮಿಂಚನ್ನು ಅವನಮೇಲೆ ಹರಿಸುತ್ತಾಳೆ. ಆಗ ಭರತ ಮಾಡಿದ ಶಪಥಗಳನ್ನು ಕೇಳಿ ಕೌಸಲ್ಯೆ ಸಾಕ್ಷಾತ್ ತನ್ನ ಮಗನೇ ಪ್ರತ್ಯಕ್ಷವಾಗಿರುವನೆಂದು ಅನುಭವಿಸುತ್ತಾಳೆ. ಸೀತಾದೇವಿಯೂ ಕೂಡ ಪಂಚವಟಿಯಲ್ಲಿ ಲಕ್ಷ್ಮಣನನ್ನು ಕಠೋರ ವಾಗ್ಬಾಣಗಳಿಂದ ನೋಯಿಸುವಾಗ ಭರತನಿಂದ ಪ್ರೇರಿತನಾಗಿ ಅಣ್ಣನ ನಾಶವನ್ನು ಬಯಸುತ್ತಿದ್ದೀಯೆ' ಎಂದು ಹೇಳಲಿಲ್ಲವೆ ? ಮುಂದೆ ಅಶೋಕವನದಲ್ಲಿ ಆ ಶಂಕೆಯನ್ನು ತೊರೆದು 'ಭರತನೂ ಸೇನಾಸಮೇತನಾಗಿ ಲಂಕೆಯ ಲಗ್ಗೆಗೆ ಬರಬಹುದಲ್ಲವೆ' ? ಎಂದು ಹನುಮನ ಸಂಗಡ ಹೇಳಲಿಲ್ಲವೆ ? ಭರತನ ಪ್ರಾಮಾಣಿಕತೆಯ ತೇಜಸ್ಸು, ಅಲ್ಲಿಯವರೆಗೂ ಪ್ರಸರಿಸುವಷ್ಟು ಪರಿಣಾಮಕಾರಿಯಾಗಿತ್ತಲ್ಲವೆ ? ಲೌಕಿಕ ವ್ಯವಹಾರ ತಜ್ಞನಾದ ರಾಘವನೂ ಮಹಾತ್ಮ ಭರತನ ವಿಷಯದಲ್ಲಿ ಶಂಕಿಸಿದನಲ್ಲ!! ಲಂಕಾದಹನಮಾಡಿ ಭರದ್ವಾಜಾಶ್ರಮಕ್ಕೆ ಹಿಂದಿರುಗಿಬಂದಾಗ ಹನುಮನನ್ನು ನಂದಿಗ್ರಾಮದ ತಪೋವನಕ್ಕೆ ಕಳಿಸಿ ಭರತನ ಇಂಗಿತವನ್ನರಿತು ಬಾ ಎಂದು ಕಳಿಸುತ್ತಾನೆ. ಭರತನ ಪ್ರಾಮಾಣಿಕತೆಯು ಲೋಕವಾರ್ತೆಯಾಗಿರುವಾಗ ಅದರ ಕಾವು ಸೀತಾಪತಿಗೂ ತಟ್ಟಿದೆಯೆಂದು ಊಹಿಸಿ ಮತ್ತು ಅದರಿಂದ ಪ್ರಭಾವಿತನಾಗಿ ಹಿಂದಿರುಗಿ ಹೋಗಲೇ ಇಲ್ಲ. ಅಷ್ಟರಲ್ಲೆ ರಾಮನು ತಾನು ಶಂಕಿಸಿದುದು ತಪ್ಪೆಂದು ತಿಳಿದವನಂತೆ ನಂದಿ ಆಶ್ರಮಕ್ಕೆ ಬಂದುಬಿಟ್ಟ. ಭರತನ ಪ್ರಾಮಾಣಿಕತೆಯೇ ಅವನ ದೋಷವಾಗಿ ಕಾಣುವ ಮಟ್ಟಕ್ಕೇರಿತ್ತು. ಇವರುಗಳೆಲ್ಲರ ಅನುಮಾನ ನಿವಾರಣೆ ಮಾಡುವುದೇ ಅವನ ತಪಸ್ಸಿನ ಒಂದು ಅಂಶವಾಗಿತ್ತು. ಶ್ರೀರಾಮನಂತೆಯೇ ವಿಜಯಿಯಾದ.

## ಪ್ರಾಮಾಣಿಕತೆಯ ಶಕ್ತಿ ಎಷ್ಟು ?

ಶ್ರೀರಾಮನನ್ನು ಯಾರೂ ಯಾವ ಕ್ಷೇತ್ರದಲ್ಲೂ ಎದುರಿಸಿದವರಿಲ್ಲ ; ಎದುರಿಸಿ ಗೆದ್ದವರಿಲ್ಲ. ರಾಮಾನುಜನು ಅನೇಕ ಸಂದರ್ಭಗಳಲ್ಲಿ ರಘುಕುಲ ತಿಲಕನನ್ನು ಪ್ರತಿಭಟಿಸಿದ್ದಾನೆ. ಆದರೆ ಅವನ ಸಾಂತ್ವನಕ್ಕೆ ಆ ಕೂಡಲೆ ಮಣಿಯುತ್ತಿದ್ದ. ಜಾಬಾಲಿ ಋಷಿಯು ಸೀತಾಪತಿಯ ಸಂಗಡ ವಾಗ್ಯುದ್ಧ ಮಾಡಿ ಸೋತ. ಆಮೇಲೆ ವಾಲಿಯು ಕಾದಾಡಿ ತನ್ನ ತಪ್ಪನ್ನೊಪ್ಪಿಕೊಂಡ. ಸೀತೆಯೂ ತನ್ನ ಸಲಿಗೆಯಿಂದ ಗಂಡನೊಂದಿಗೆ ವಿಚಾರ ಮಂಥನಕ್ಕಿಳಿದು ಸೋತಿದ್ದಾಳೆ. ವಿಭೀಷಣನು ಶ್ರೀರಾಮನಿಗೆ ಶರಣಾದಾಗ ಹನುಮ ಸುಗ್ರೀವಾದಿಗಳು ವಾಗ್ಯುದ್ಧಕ್ಕಿಳಿದು ಪರಾಜಿತರಾದರು. ಶ್ರೀರಾಮನೊಂದಿಗೆ ಹೀಗೆ ವಾದಿಸಿದವರೆಲ್ಲಾ ಅಪ್ರಮಾಣಿಕರೆಂದಲ್ಲ. ಅಂದರೆ ಭರತನಿಗೆ ಆತ್ಮ ಬಲ ಮೈಗೂಡಿದಷ್ಟು ಅವರಲ್ಲಿ ವ್ಯಕ್ತವಾಗಲಿಲ್ಲವೆನ್ನಬಹುದಷ್ಟೆ ? ಸರ್ವ ರಿಂದಲೂ ಪೂಜೆಗೊಳ್ಳುತ್ತಿದ್ದ ರಾಜಗುರುಗಳಾದ ವಸಿಷ್ಠರನ್ನು ತುಂಬಿದ ಸಭೆಯಲ್ಲಿ ಬಹು ಗಂಭೀರವೂ ಮಧುರವೂ ಆದ ವಾಗ್ಬಾಣಗಳನ್ನು ಪ್ರಯೋ ಗಿಸಿ ತೇಜೋವಧೆ ಮಾಡುವ ಮಟ್ಟಕ್ಕೆ ಇಳಿಯುತ್ತಾನೆ. ತನ್ನ ತ್ರಿಕರಣ ಶುದ್ಧಿಯ ಪ್ರಭಾವದಿಂದ ಶ್ರೀರಾಮನು ಚಿತ್ರಕೂಟವಲ್ಲಿ ಸ್ವಲ್ಪ ಹಿಮ್ಮೆಟ್ಟು ವಂತೆ ಮಾಡಿದ್ದಾನೆ. ಶ್ರೀರಾಮನು ಮಹಾ ದುಃಸ್ಥಿತಿಯಲ್ಲಿದ್ದಾಗಲೂ ಈ ಭ್ರಾತೃವರೇಣ್ಯನನ್ನು ಸ್ಮರಿಸಿಕೊಳ್ಳುತ್ತಾನೆ. ಅಷ್ಟೇಕೆ ? ಚಿತ್ರಕೂಟದಿಂದ ಅತ್ರಿಯಾಶ್ರಮದತ್ತ ಪ್ರಯಾಣ ಬೆಳೆಸಲು ಭರತನ ಪ್ರತಿಭಟನಾತ್ಮಕ ಕ್ರಿಯೆಗಳೇ ಕಾರಣವಲ್ಲವೆ ? ಅವನ ಪ್ರಾಮಾಣಿಕತೆಯ ಶಕ್ತಿ, ನ್ಯಾಯ ಧರ್ಮದ ಆಶ್ರಯ ಅವನನ್ನು ನಿಷ್ಕಾಮ ಕರ್ಮಯೋಗಿಯನ್ನಾಗಿ ಪರಿ ವರ್ತಿಸಿತು. ಆದರೆ ಸ್ಥಿತಪ್ರಜ್ಞನನ್ನಾಗಿಸಲಿಲ್ಲ.

## ಶ್ರೀರಾಮ ಭರತರ ಶೀಲೋನ್ನತಿಯ ಬಗೆಗೆ ಭಿನ್ನರುಚಿ

ಶ್ರೀರಾಮನು ಹೆಚ್ಚೋ ಭರತನು ಹೆಚ್ಚೋ ಎಂಬ ವಿಚಾರ ಹಲವು ಕಾಲಗಳಿಂದಲೂ ಹಲವು ರಾಮಾಯಣ ಪ್ರಿಯರಿಂದ ಮತ್ತು ಭಕ್ತರಿಂದ ವಾದ ಕ್ಷೇತ್ರವಾಗಿ ಪರಿಣಮಿಸಿದೆ. ಉತ್ತರದ ಭಾರತೀಯರು ಭರತನೇ ರಘುವೀರನಿಗಿಂತ ಮಿಗಿಲೆಂದು ವಾದಿಸುತ್ತಾರೆ. ಈ ವಾದವು ಕೊನೆಗಾಣ

ಬೇಕಾದರೆ ರಾಮಾಯಣ ಕಾವ್ಯವನ್ನು ಪೂರ್ಣದೃಷ್ಟಿಯಿಂದ ನೋಡಬೇಕು. ಇಕ್ಷ್ವಾಕು ವಂಶೀಕರ ಪರಮಗುರಿ ಅವರ ಶತ್ರುಗಳಾದ ರಾಕ್ಷಸರನ್ನು ನಿರ್ಮೂಲ ಮಾಡಿ ಲೋಕ ಕಲ್ಯಾಣವೆಸಗುವುದೇ ಆಗಿತ್ತು. ಈ ಧ್ಯೇಯ ಸಾಕ್ಷಾತ್ಕಾರಕ್ಕೆ ಯಾರ್ಯಾರು ಎಷ್ಟೆಷ್ಟು ಸಹಾಯಮಾಡಿದರು, ಕಾಣಿಕೆಗಳನ್ನು ಅರ್ಪಿಸಿ ಶ್ರೀರಾಮನು ವಿಜಯಿಯಾಗುವಂತೆ ಮಾಡಿದರು ? ಈ ಮಹಾಕಾರ್ಯದಲ್ಲಿ ಶಬರಿ ಊರ್ಮಿಳೆಯರಂತೆ ನಿರೀಕ್ಷಣಾ ತಪಸ್ಸು ಮಾಡಿದವರೂ ಅಗತ್ಯವಾದ ಕಾಣಿಕೆಯನ್ನರ್ಪಿಸಿದ್ದಾರೆ. ಆದರೆ ಇದರಲ್ಲಿ ಪ್ರಮುಖ ಕಾರ್ಯಕರ್ತ್ರ ಸೀತಾಪತಿಯೆಂಬುದನ್ನು ಮರೆಯಲಾಗದು. ಅವನೇ ಅದ್ವಿತೀಯ ಮಹಾ ದಂಡನಾಯಕ, ಈ ಅಧಿಕಾರ ರಾಘವನೊಬ್ಬನಿಗೇ ಮೀಸಲು, ಲಕ್ಷ್ಮಣ, ಭರತ, ಶತ್ರುಘ್ನರಿಗಿಲ್ಲ. ಭರತ ಮತ್ತು ಶ್ರೀರಾಮರ ಗುಣಾವಗುಣಗಳನ್ನು ತುಲನೆ ಮಾಡುವಾಗ ಈ ಮುಖ್ಯಾಂಶವನ್ನು ಗಮನಿಸುವುದು ಉತ್ತಮ.

ಮೊಟ್ಟಮೊದಲು ರಾಮಾಯಣ ಪ್ರಿಯರ ಗಮನವನ್ನು ಸೆಳೆಯುವುದು ರಾಮ ಭರತರಿಬ್ಬರಿಂದಲೂ ಪಟ್ಟಾಭಿಷೇಕ ನಿರಾಕರಣೆ. ಶ್ರೀರಾಮನು ಪಿತೃವಾಕ್ಯ ಪರಿಪಾಲನಾರ್ಥವಾಗಿ ; ರಾಜನ ಆಣತಿಯಂತೆ ಪಟ್ಟಾಭಿಷೇಕದ ಆಸೆಯನ್ನು ತ್ಯಜಿಸುತ್ತಾನೆ. ಭರತನು ತಂದೆತಾಯಿಯರ ಧರ್ಮಾನುಷ್ಠಾನದಿಂದ ತಾನಾಗಿಬಂದ ರಾಜ್ಯಾಭಿಷೇಕವನ್ನು ತ್ಯಜಿಸುತ್ತಾನೆ. ಆದರೆ ತಂದೆಯು ಮರಣ ಕಾಲದಲ್ಲಿ ಶಾಪಕೊಟ್ಟಂತೆ ಭರತನಿಗೆ ರಾಜನಾಗುವ ಅಧಿಕಾರವೇ ಇಲ್ಲ. ಆದ್ದರಿಂದ ಪರೋಕ್ಷವಾಗಿ ಪಿತನ ಆಜ್ಞೆಯನ್ನು ಪಾಲಿಸಿದಂತೆಯೇ ಆಯಿತು. ಸೀತಾಪತಿಯು ಜಟಾಜೂಟಧಾರಿಯಾಗಿ ತಾಪಸವೃತ್ತಿಯನ್ನು ದಂಡಕಾರಣ್ಯ ದಲ್ಲಿ ಕೈಕೊಳ್ಳಬೇಕಾಯಿತು. ಕೈಕೇಯಿ ಪುತ್ರನದಾದರೊ ಸ್ವಯಂಕೃತ ಅಪೂರ್ವತ್ಯಾಗ. ಸ್ವಾಭಾವಿಕವಾದ ವ್ಯಕ್ತಿತ್ವದ ಪ್ರಕಟಣೆ. ಇವನೂ ರಾಜ ಧಾನಿಯಲ್ಲಿರದೆ ನಂದಿ ಗ್ರಾಮದಲ್ಲಿ ಆಶ್ರಮವಾಸಿಯಾಗಿ ಜಟಾಜೂಟಧಾರಿ ಯಾಗಿ ಗೆಡ್ಡೆಗೆಣಸುಗಳಿಂದ ಜಠರಾಗ್ನಿಯನ್ನು ತಣಿಸುತ್ತಿದ್ದ, ಮೃಷ್ಟಾನ್ನ ಭೋಜನ ಮಾಡುವ ಅವಕಾಶವಿದ್ದರೂ. ಶ್ರೀರಾಮನಾದರೊ ಗತ್ಯಂತರ ವಿಲ್ಲದೆ ಫಲ ಮೂಲಗಳನ್ನು ಭುಜಿಸಬೇಕಿತ್ತು.

ಅತ್ಯುಗ್ರವಾದ ನಿಯಮವೆಂದರೆ ದಾಂಪತ್ಯ ಜೀವನದಲ್ಲಿ ಕಾಯೇನ

ವಾಚಾ ಮನಸಾ ಬ್ರಹ್ಮಚರ್ಯವನ್ನು ಆಚರಿಸುವುದು. ಶ್ರೀರಾಮನಿಗೆ ಆ ವ್ರತಾಚರಣೆ ಜಾನಕೀದೇವಿಯಿಂದ ಹೇರಲ್ಪಟ್ಟಿತು. ಆದರೆ ನಂದಿಗ್ರಾಮ ವಾಸಿಗಳೆಲ್ಲರಿಗೂ ಭರತನಿಂದಲೇ ನಿಯಮಿತವಾಯಿತು. ಮತ್ತೆ ಭರತನ ಸ್ವಭಾವಜನ್ಯವಾದ ವ್ಯಕ್ತಿತ್ವದ ಪ್ರಕಾಶನ. ಶ್ರೀರಾಮನಿಗೆ ತನ್ನ ಧ್ಯೇಯ ಸಾಕ್ಷಾತ್ಕಾರಕ್ಕೆ ಹಲವರ, ದೇವತೆಗಳ, ಋಷಿ ವಾನರರುಗಳ ಸಹಾಯ ಬೇಕಿತ್ತು. ಅದು ಒದಗಿತು. ಶ್ರೀರಾಮನಿಗೆ ಲೋಕ ಕಲ್ಯಾಣದ ಗುರಿ. ಭರತನಿಗಾದರೊ ರಾಮನ ಶ್ರೇಯಸ್ಸೇ ಗುರಿ. ಸೀತಾಪತಿಯು ವನವಾಸ ವನ್ನು ಅಕ್ಷರಶಃ ಪಾಲಿಸುತ್ತಾನೆ. ಯಾವ ರಾಜಧಾನಿ, ಪಟ್ಟಣಗಳಿಗೂ ಹೋಗಲಿಲ್ಲ—ಕಿಷ್ಕಿಂಧೆ, ಲಂಕೆಗಳಿಗೆ. ರಾಜರುಗಳಿಗೆ—ಸುಗ್ರೀವ, ಅಂಗದ, ವಿಭೀಷಣರಿಗೆ—ಪಟ್ಟಾಭಿಷೇಕ ಮಾಡುವ ಸಂದರ್ಭಗಳು ಅವನಿಗೆ ಒದಗಿದುವು. ಅವುಗಳನ್ನು ಪರೋಕ್ಷವಾಗಿ ರಾಮಾನುಜನ ಮುಖೇನ ಏರ್ಪಡಿಸಿದ. ಭರತ ಮಾತ್ರ ಪ್ರತ್ಯಕ್ಷವಾಗಿ ಶ್ರೀರಾಮನ ಪಟ್ಟಾಭಿಷೇಕವನ್ನು ನೆರವೇರಿಸಿ, ನಿಷ್ಕಾಮಕರ್ಮಿಯಾಗಿ ಯುವರಾಜ ಪದವಿಯನ್ನು—ತಾಯಿ ಅಪೇಕ್ಷಿ ಸಿದ್ದನ್ನು—ಅಲಂಕರಿಸಿದ. ಶ್ರೀರಾಮನ ಪಟ್ಟಾಭಿಷೇಕವು ವಂಶದ ಪದ್ಧತಿ ಯಂತೆ ನಡೆಯಿತು. ಭರತನದು ಲಕ್ಷ್ಮಣನ ತ್ಯಾಗದಿಂದ ಸಂಭವಿಸಿತು. ಭ್ರಾತೃವಾತ್ಸಲ್ಯದಲ್ಲಿ ಇಬ್ಬರೂ ಸ್ಪರ್ಧಾತ್ಮಕವಾಗಿಯೇ ನಡೆದುಕೊಂಡರು. ಆದರೆ ವಿಚಾರಪೂರಕವಾದದ್ದು ಸೀತಾಪತಿಯದು. ಭರತನದು ಭಾವಾವೇಶಾ ತ್ಮಕವೂ ಸ್ವಾಭಾವಿಕವೂ ಆದದ್ದು.

ಭರತ ತನ್ನ ಭಾವಾವೇಶದಲ್ಲಿ ತಂದೆ ತಾಯಿಗಳನ್ನು ಕಟುವಾಗಿ ನಿಂದಿಸು ತ್ತಾನೆ. ಅದು ತಿಳಿಗೇಡಿತನದಿಂದ ಮೂಡಿ ಬಂದದ್ದು. ಅದಕ್ಕೆ ದಶರಥ ಕೈಕೇಯಿಯರೆ ಸ್ವಲ್ಪ ಕಾರಣರೆಂದು ಹೇಳಬಹುದು. ಅದು ಸಹಜವಾಗಿಯೇ ಬೆಳೆದ ಭಾವೋದ್ವೇಗ. ಶ್ರೀರಾಮನು ಗುರುಹಿರಿಯರನ್ನು ಮಾತಾಪಿತೃ ಗಳಾರನ್ನೂ ಯಾವ ಸಂದರ್ಭದಲ್ಲೂ, ಯಾವ ಕಠಿಣ ಕ್ರೂರ ಪರಿಸ್ಥಿತಿ ಯಲ್ಲಿಯೂ ನಿಂದಿಸಲಿಲ್ಲ. ಅದು ಅವನ ವಿದ್ಯಾಬುದ್ಧಿ ಸಂಸ್ಕಾರಗಳಿಂದ

ಪರಿಷ್ಕೃತವಾದದ್ದು ಸನಾತನ ಸಂಸ್ಕೃತಿಯು ಅಮೃತವನ್ನು ಕಂಠಪೂರ್ಣ ಹೀರಿದ್ದ. ಭರತನಿಗೆ ಅವನ ಹುಟ್ಟುಗುಣವೇ ಕಡಿವಾಣ ಹಾಕಿಬಿಟ್ಟಿತು.

ಶ್ರೀರಾಮನಿಗೆ ಶತ್ರುವಿನ ಮರಣಾನಂತರ ಅವನನ್ನು ಭ್ರಾತೃವಂತೆ ಪರಿಗಣಿಸುವ ಸಂದರ್ಭಗಳು ಒದಗಿದವು. ವಾಲಿಯು ಪ್ರೇತ ಸಂಸ್ಕಾರವನ್ನು ರಾವಣನ ಶವಸಂಸ್ಕಾರವನ್ನೂ ಪ್ರತ್ಯಕ್ಷವಾಗಿಯೇ ನಿಂತು ಮಾಡಿಸುತ್ತಾನೆ. ಶತ್ರುಗಳ ಶೌರ್ಯವನ್ನು ಮೆಚ್ಚಿ ಶಹಭಾಷ್‌ಗಿರಿ ಕೊಡುವ ಗುಣಗ್ರಹಣ ಶಕ್ತಿ ಅವನಲ್ಲಿತ್ತು. ಇಂಥ ಪ್ರಕರಣಗಳು ಭರತನಿಗೆ ಸಂಘಟಿಸಲೇ ಇಲ್ಲ. ಲಕ್ಷ್ಮಣಾಗ್ರಜನು ಪಕ್ಷಿಯ ಶವಸಂಸ್ಕಾರವನ್ನೂ ವಿಧಿಪೂರ್ವಕವಾಗಿ ಮಾಡಿದ ಮಹಾನುಭಾವ. ಚಿತ್ರಕೂಟದಲ್ಲಿ ತಾನು ತಿಳಿದ ಜ್ಞಾನ ಧರ್ಮದಿಂದ ಭರತನು ಅತಿ ಉದ್ವಿಗ್ನನಾಗಿ ಶ್ರೀರಾಮನನ್ನು ಧರ್ಮಸಂಕಟಕ್ಕೆ ಸಿಕ್ಕಿಸುತ್ತಾನೆ, ಅದು ರಾಮನ ಜೀವನ ಪರ್ಯಂತ ಇಣುಕಾಡುತ್ತಲೇ ಇರುತ್ತದೆ.

ಶ್ರೀರಾಮನಿಗೊದಗಿದ ಕಷ್ಟನಷ್ಟಗಳನ್ನೂ ಭರತನಿಗೆ ಸ್ವಯಂಕೃತವಾಗಿ ಒದಗಿದ ಸಂಕಟಗಳನ್ನೂ ತುಲನೆ ಮಾಡಿದರೆ ಬಹಳಷ್ಟು ವ್ಯತ್ಯಾಸ ಕಾಣುತ್ತದೆ; ಅವು ಗುರುವಾಜ್ಞೆಯಿಂದ ಸಂಭವಿಸಿದ್ದುವು. ಆದ್ದರಿಂದ ಅವುಗಳ ಕ್ರೂರಾಘಾತ ಸಹಿಸಲಸದಳ. ಭರತನು ಆಹ್ವಾನಿಸಿಕೊಂಡ ಕ್ಲೇಶಗಳು ಅಷ್ಟು ನಿಶಿತವಾಗಿ ಹಿಂಸಿಸಲಿಲ್ಲವೆಂದು ಹೇಳಬಹುದು.

ಸಂವೇದನಾಶೀಲತೆಯಲ್ಲಿ ಇಬ್ಬರೂ ಸರಿಸಮಾನರೇ. ಆದರೆ ಆದರ ಮೂಲ ಬೇರೆ. ಭರತನಿಗೆ ಶ್ರೀರಾಮನ ವಿರಹ, ಭ್ರಾತೃವಾತ್ಸಲ್ಯದ ಆಧಿಕ್ಯ. ಶ್ರೀರಾಮನಿಗೆ ಸೀತಾವಿರಹ; ವಿಪ್ರಲಾಪ, ಇಬ್ಬರೂ ಬುದ್ಧಿಭ್ರಮಣೆಯತ್ತ ಸಾಗುತ್ತಾರೆ. ಏಕಪತ್ನೀವ್ರತಧಾರಿಯಾಗಿರುವ ರಾಮನು ಹಾಗೆ ಪರಿತಪಿಸುವುದು ಸರಿ; ಆದರೆ ಅತಿಯಾಯಿತೇನೊ ಎನಿಸುತ್ತದೆ, ಅವನು ಸುಸಂಸ್ಕೃತಿವಂತನಾಗಿರುವುದನ್ನು ಗಮನಿಸಿದರೆ. ಆವೇಶಭರಿತ ಮಾತುಗಳನ್ನಾಡುವುದು ಭರತನ ಸ್ವಭಾವವೇ ಆಗಿಬಿಟ್ಟಿತು.

ಇಂದ್ರಿಯ ನಿಗ್ರಹ ಮಾಡಿದವರಲ್ಲಿ ಶ್ರೀರಾಮನೇ ಶ್ರೇಷ್ಠ. ಅವನಿಗೆ ವ್ಯವಸಾಯಾತ್ಮಕ ಬುದ್ಧಿಯನ್ನು ಬೆಳೆಸಿಕೊಳ್ಳುವುದಕ್ಕೆ ಅಂಥ ಪರಿಸರ,

ಕ್ಷೇತ್ರ ಸಿಕ್ಕಿತು. ಶ್ರೀರಾಮನು ಕೈಕೇಯಿಯ ವಚನವನ್ನೂ ಪಾಲಿಸಿದ. ಅವಳಿಂದುಂಟಾದ ಕಷ್ಟಕಾರ್ಪಣ್ಯಗಳಿಂದ ಮಹತ್ಕೀರ್ತಿಯನ್ನು ಗಳಿಸಲು ಸಾಧ್ಯವಾಯಿತೆಂದರಿತಿದ್ದ. ಭರತನು ತಾಯಿಯ ಮಾತನ್ನು ಮೀರಿದ. ಅಷ್ಟೇ ಅಲ್ಲ; ಅವಳ ಗುಣಗ್ರಹಣಮಾಡಲು, ಅವಳ "ಕಾರ್ಯತಂತ್ರ"ವನ್ನು, ಕುಟಿಲ ತಂತ್ರವನ್ನು ಅರಿಯಲು ಪ್ರಯತ್ನಿಸಲೇ ಇಲ್ಲ. ಹಾಗೆ ಮಾಡಿದ್ದಲ್ಲಿ ತಾಯಿಯಲ್ಲಿ ಕ್ಷಮೆ ಬೇಡುತ್ತಿದ್ದ. ಭರತನಲ್ಲಿ ವೈಚಾರಿಕತೆಯ ಕೊರತೆ ಸಾಕಷ್ಟಿದೆಯೆಂದು ಹೇಳಬಹುದು. ತಾನೂ ತಾಪಸೀವೃತ್ತಿಯನ್ನು ಅವಲಂಬಿಸಿದ್ದು ಭ್ರಾತೃ ವಾತ್ಸಲ್ಯವನ್ನು ಪ್ರಕಟಿಸುವುದಕ್ಕಾಯಿತು. ಆದರೆ ತನ್ನಿಂದ ತನ್ನ ಕುಟುಂಬದವರೂ ಮಂತ್ರಿ ಪುರೋಹಿತಾದಿಗಳೂ ಬಲವಂತದ ಮಾಘ ಸ್ನಾನ ಮಾಡಬೇಕಾಗಿ ಬರುತ್ತದೆಯಲ್ಲ ಎಂದು ಯೋಚಿಸಲೇ ಇಲ್ಲ!! ಮಾನಸಿಕವಾಗಿ ಪರರನ್ನು ನೋಯಿಸುವುದು ಹಿಂಸೆಯೇ ಅಲ್ಲವೆ? ಆದರೆ ಅಂಥ ಉದ್ದೇಶ ಅವನಿಗಿರಲಿಲ್ಲ. ರಾಮನದು ಜಗಜ್ಜೀವಿಗಳ ಭ್ರಾತೃತ್ವ. ಭರತನದು ದಾಶರಥಿಗಳಿಗೇ ಸೀಮಿತ. ಶ್ರೀರಾಮನೂ ಪ್ರತಿಜ್ಞೆಮಾಡಿ ಆದರಂತೆ ನಡೆದುಕೊಳ್ಳುತ್ತಾನೆ. ತಾನು ಕಪಿವೀರನಿಗೆ ಶರಣಾದಾಗ ಸರ್ವಸ್ವವನ್ನೂ ತ್ಯಾಗಮಾಡಿ ನಡೆದುಕೊಳ್ಳುತ್ತಾನೆ. ಅವನಿಗೆ ಅಪಾರವಾದ ಆತ್ಮ ವಿಶ್ವಾಸವಿತ್ತು. ಆದರೆ ಭರತನು ದುಡುಕಿ ಪ್ರತಿಜ್ಞೆಯನ್ನು ಮಾಡುತ್ತಾನೆ. ವನವಾಸ ಮುಗಿದ ಮಾರನೇ ದಿನವೇ ರಾಮ ಬರುತ್ತಾನೆಂಬ ಆತ್ಮವಿಶ್ವಾಸವು ಭರತನಿಗಿತ್ತೆ? ಯಾವ ಆಧಾರ? ಯಾವ ಆಶ್ರಯವಿತ್ತು? ಲಂಕೆಯಿಂದ ಅಯೋಧ್ಯೆಗೆ ಬರಬೇಕಾದರೆ ಎಷ್ಟು ಕಾಲಾವಕಾಶ ಬೇಕು? ಎಷ್ಟು ಅಡ್ಡಿ ಆತಂಕಗಳನ್ನು ಎದುರಿಸಬೇಕು? ಎಷ್ಟು ಋಷಿ ರಾಜರುಗಳ ಆತಿಥ್ಯವನ್ನು ಸ್ವೀಕರಿಸಬೇಕು. ಅದೂ ಅಲ್ಲದೆ, ರಕ್ಷಣೀಯಳಾದ ಜನಕಮಹಾರಾಜನ ಪುತ್ರಿಯೂ ದಶರಥ ಮಹಾರಾಜನ ಪ್ರೀತಿಯ ಸೊಸೆಯೂ ಆಗಿರುವ ಶ್ರೀರಾಮನ ಪತ್ನಿ ಸಂಗಡವಿರುವಾಗ! ಒಂದೆರಡು ದಿವಸಗಳಾದರೂ ತಡವಾಗಿ ಬರುವ ಸಂದರ್ಭವಿದೆ. ತನ್ನ ಸಹೋದರರಲ್ಲಿ ಯಾರು ಅಳಿದರೂ ತಾನೂ ಸಂಗಡಲೇ ಮೃತ್ಯುವನ್ನಪ್ಪುತ್ತೇನೆಂದು ಶ್ರೀರಾಮ ನಿರ್ಧರಿಸಿಕೊಂಡಂತಿದೆ. ಒಂದು ದಿವಸ ತಡವಾಗಿ ಬಂದಿದ್ದರೆ ಭರತನೂ ಇಲ್ಲ; ಇಡೀ ಇಕ್ಷ್ವಾಕು ವಂಶವೇ ನಾಶ. ಸೀತೆಯೂ ಆಂಜನೇಯನ ಸಂಗಡ ದಾಶರಥಿಗಳ

ಮತ್ತು ವಾನರರ ಪ್ರಾಣ "ತನ್ನ ಪ್ರಾಣವನ್ನು ಅವಲಂಬಿಸಿದೆ" ಎನ್ನುತ್ತಾಳೆ. ಅವಳು ದುಡುಕಿ ಅಥವಾ ಸ್ತ್ರೀ ಚಪಲತೆಯಿಂದ ನುಡಿದ ನುಡಿಯಲ್ಲಿ, ರಾವಣ ನನ್ನೇ ಸುಟ್ಟು ಬೂದಿ ಮಾಡುದ ಪಾತಿವ್ರತ್ಯಾಗ್ನಿಯ ಶಕ್ತಿಯಲ್ಲಿ ವಿಶ್ವಾಸ ವನ್ನು ಇಟ್ಟು ಹೇಳುತ್ತಾಳೆ. ಭರತನಿಗೆ ಯಾವ ಶಕ್ತಿಯ ಆಶ್ರಯವಿತ್ತೊ ಎಲ್ಲಿಯೂ ಪ್ರಕಟವಾಗಿಲ್ಲ. ಶ್ರೀರಾಮನು ರಣರಂಗದಲ್ಲಿ ಒಬ್ಬನೆ. ಅವನ ಬಾಣವೇ ರಾಮಬಾಣ. ಆದರೆ ಭರತನಿಗೆ ಅಂಥ ಕ್ಷಾತ್ರ ಶಕ್ತಿಯನ್ನು ಪ್ರದರ್ಶಿಸುವ ಸಂದರ್ಭವೇ ಒದಗಲಿಲ್ಲ.

ಶ್ರೀರಾಮನಿಗೆ ದೈವಸಹಾಯವು ಪ್ರತ್ಯಕ್ಷವಾಗಿಯೂ ಪರೋಕ್ಷ ವಾಗಿಯೂ ಇತ್ತು. ಸ್ವಲ್ಪಮಟ್ಟಿಗೆ ಅದರಲ್ಲಿ ಬಂಧಿತನಾಗಿದ್ದ. ಆದರೆ ಭರತನಿಗೆ ಅಂಥ ಸಹಾಯಗಳು ಇರಲೂ ಇಲ್ಲ. ಅವುಗಳನ್ನು ಆಹ್ವಾನಿಸಲೂ ಇಲ್ಲ. ಅವನ ಸ್ವಭಾವ ಜನ್ಯವಾದ ವ್ಯಕ್ತಿತ್ವವು ತಾನಾಗಿಯೇ ಬೆಳೆದು ಪ್ರಕಾಶ ಗೊಂಡುದು ವ್ಯಕ್ತವಾಗುತ್ತದೆ.

ಇನ್ನುಳಿಯಿತು ರಾಮಾಯಣದ ಕೇಂದ್ರ ಘಟನೆಯ ಸಂದರ್ಭ— ಪಂಚವಟಿ ಪ್ರಸಂಗ. ಭರತನ ಸ್ವಾಭಾವಿಕವಾದ ಗುಣಗಳನ್ನು ಗಮನಿಸಿ ಚಿತ್ರಕೂಟದ ಮಹದ್ಘಟನೆಯಲ್ಲಿ ವಸಿಷ್ಠರು ಪಾದುಕಾ ಪಟ್ಟಾಭಿಷೇಕವನ್ನು ಸೂಚಿಸದಿದ್ದರೆ, ಅವನು ಅಯೋಧ್ಯೆಯಿಂದ ಹೊರಡುವಾಗಲೆ ಘೋಷಿ ಸಿದ್ದಂತೆ ರಾಮನನ್ನು ಹಿಂಬಾಲಿಸುತ್ತಿದ್ದ. ಆಗ ಸೀತಾಪತಿ ರಾಮಾನುಜನನ್ನು, ರಾಜ್ಯವಿಲ್ಲದ ಕೋಸಲದೇಶವಾಗುವುದನ್ನು ತಪ್ಪಿಸಲು, ತನ್ನ ಪ್ರತಿನಿಧಿಯಾಗಿ ವನವಾಸದಿಂದ ಹಿಂದಿರುಗುವ ಪರ್ಯಂತ, ರಾಜ್ಯವಾಳೆಂದು, ಗತ್ಯಂತರವಿಲ್ಲದೆ ಕಳಿಸುತ್ತಿದ್ದ. ಭರತನು ಪ್ರಯಾಣ ಬೆಳೆಸಿ ಪಂಚವಟಿಯಲ್ಲಿಡುತ್ತಿದ್ದ. ಇಂದ್ರನ ಯೋಜನೆಯನ್ನರಿಯದ, ದಶರಥನ ಗುರಿಯನ್ನರಿಯದ, ಶ್ರೀರಾಮನ ಧ್ಯೇಯವನ್ನೂ ಮತ್ತು ಕರ್ತವ್ಯವನ್ನೂ ತಿಳಿಯದ, ವಿಚಾರಹೀನನಾದ ಅವನು, ಸೀತೆಯು ರಾಮನ ಯೋಗಕ್ಷೇಮವನ್ನು ನೋಡೆಂದು ನಿಷ್ಠೂರವಾಗಿ ಆಜ್ಞಾಪಿಸಿದಾಗ, ಏನು ಮಾಡುತ್ತಿದ್ದ ? ಆವೇಶಬಂಧಿತನಾದವನು ಹೋಗದೆ ಇದ್ದುಬಿಡುತ್ತಿದ್ದನೇನೊ ?? ಅಥವಾ ಹೋಗದಿದ್ದರೆ ಅತ್ತಿಗೆ ಪ್ರಾಣ ಕಳೆದುಕೊಳ್ಳುವೆನೆಂದು ಹೇಳಿದಾಗ ಅವಳನ್ನು ಹಿಡಿದು ನಿಲ್ಲಿಸುತ್ತಿದ್ದನಲ್ಲವೆ ?

ಹಾಗಲ್ಲದಿದ್ದರೆ ಮಾರೀಚ ಮೃಗವನ್ನು ತಾನೇ ಹಿಡಿದುಕೊಂಡು ಬರುತ್ತೇನೆಂದು, ಅಣ್ಣನಿಗೇಕೆ ಆ ಕಷ್ಟವನ್ನು ಕೊಡಬೇಕೆಂದು, ಹೊರಟುಹೋಗುತ್ತಿದ್ದನಲ್ಲವೆ ? ಆಗ ರಾಮಾಯಣವು ಹೇಗೆ ಮುಂದುವರಿಯುತ್ತಿತ್ತು ? ಆ ಸಂದರ್ಭದಲ್ಲಿ ಹಾ, ರಾಮ, ಸೀತಾ ಎಂದು ಮಾರೀಚ ಕೂಗು ಹಾಕಿದ್ದರೆ ರಾಮನು ಸೀತೆಯನ್ನು ಒಂಟಿಯಾಗಿ—ರಾಕ್ಷಸರ ಹದ್ದಿನಕಣ್ಣು ಸದಾ ಪರ್ಣಕುಟೀರದತ್ತ ಇದೆ ಎಂದು ನಿಶ್ಚಿತವಾಗಿ ತಿಳಿದೂ-ಬಿಟ್ಟು ಹೋಗುತ್ತಿದ್ದುದು ರಾಮನ ಮಹಾಪರಾಧವಾಗುತ್ತಿತ್ತು.

ಹೀಗೆ ರಾಮಾಯಣ ಕಾವ್ಯವನ್ನು ಸಮಗ್ರದೃಷ್ಟಿಯಿಂದ ಅವಲೋಕಿಸಿದಾಗ ಭರತ, ಲಕ್ಷ್ಮಣ, ಶತ್ರುಘ್ನರು ಶ್ರೀರಾಮನ ಹೆಗಲೆತ್ತರ ನಿಲ್ಲುತ್ತಾರೆಯೆ ಹೊರತು ಸರಿಸಮಾನರೂ ಆಗುವುದಿಲ್ಲ. ಅವನಿಗೆ ಮಿಗಿಲೆನಿಸುವುದೂ ಇಲ್ಲ : ಹಾಗೆ ಅವರು ಅದನ್ನು ಬಯಸುವವರೂ ಅಲ್ಲ, ಅವರ ಸೀಮಿತ ಕ್ಷೇತ್ರದಲ್ಲೇ ತಮ್ಮ ಸ್ವಧರ್ಮವನ್ನು ಪಾಲಿಸಿ ಪುರುಷೋತ್ತಮನು ರೂಪುಗೊಳ್ಳುವುದಕ್ಕೆ ಕಾರಣರಾಗುತ್ತಾರೆ.

ರಾಮಾಯಣವನ್ನು ಆದರ ಮಾತೃಸ್ಥಾನದಲ್ಲಿ ಪಠಿಸದಿದ್ದರೆ ಭವಿಷ್ಯದಲ್ಲಿ ಅದನ್ನು ಪಾರಾಯಣ ಮಾಡುವವರಾರು ?

ನಾಲ್ವರು ಸಹೋದರಿಯರು ವಿಹಾರ ಗೃಹಕ್ಕೆ ಮಂದಸ್ಮಿತರಾಗಿ ಆಗಮಿಸಿದರು. ಸೀತಾದೇವಿಯು ಮುಗುಳ್ನಗೆಗೆ ಚಂಚಲದೃಷ್ಟಿಯನ್ನು ಜತೆಗೂಡಿಸಿ ಪೀಠಸ್ಥಳಾದಳು. ತಂಗಿಯರು ಪ್ರಚೋದಿತರಾಗಿ ಕಾರಣವನ್ನು ಕೇಳಿದರು. 'ಕೈಕಾ ಅತ್ತೆಯವರು ಹೇಳಿದ್ದನ್ನು ಮೆಲುಕು ಹಾಕುತ್ತಿದ್ದೆ' ಎಂದಳು. ಅದೇನೆಂದರು. ಅದು ಊರ್ಮಿಳೆ ಮಾಂಡವಿಯವರಿಗೇ ಗೊತ್ತೆಂದಳು. 'ಬಾಯಿಬಿಡಿರೆ ಅಕ್ಕಂದಿರಾ' ಎಂದು ಶ್ರುತಕೀರ್ತಿ ರಾಗವಾಗಿ ಹಾಡಿದಳು. ಈ ಕಿರಿಯ ತಂಗಿಯ ಕೈಗೆ ಸಿಕ್ಕಿದರೆ ತಪ್ಪಿಸಿಕೊಳ್ಳುವುದು ಕಷ್ಟವೆಂದರಿತು ಬಾಯಿಬಿಟ್ಟರು. ಮೊನ್ನೆ ಲಕ್ಷ್ಮಣನೂ ಭರತನೂ ತಾಯಿಯ ಬಳಿಗೆ ಉದ್ದೇಶಪೂರ್ವಕವಾಗಿ ಹೋಗಿದ್ದರು. ಆಗ ಲಕ್ಷ್ಮಣನು ತಾನಾಡಿದ್ದ 'ಕುಟಿಲತಂತ್ರ'ದ ವಿಚಾರವನ್ನೂ, ತಾಯಿಯವರೇ ನುಡಿದಿದ್ದ 'ಕಾರ್ಯ

ತಂತ್ರ'ದ ವಿಚಾರವನ್ನು ಭರತನೂ ಪ್ರಶ್ನಿಸಿದರಂತೆ. ಆಗ ಅತ್ತೆಯವರು 'ಕುಟಿಲತಂತ್ರ'ವನ್ನೂ 'ಕಾರ್ಯತಂತ್ರ'ವನ್ನೂ ಸಮನ್ವಯಗೊಂಡ 'ರಾಜತಂತ್ರ'ವನ್ನು ವಿವರಿಸಿದರಂತೆ. ಅದನ್ನು ಕೇಳಿ ಅವರು ಪೂರ್ಣ ಪ್ರಭಾವಿತರಾಗಿ ಅಮ್ಮನಡಿಗಳಿಗೆ ಮುಡಿಗಳನ್ನಿಟ್ಟು ತಾವು ಮೂಢರಾಗಿ ಮಾತೃನಿಂದೆ ಮಾಡಿದ್ದನ್ನು ಹೃತ್ಪೂರ್ವಕವಾಗಿ ಕ್ಷಮಿಸೆಂದು ವಿವಶರಾಗಿ ಬೇಡಿದರಂತೆ. ಆಗ ಮಾತೆಯು ಇಬ್ಬರನ್ನೂ ತೊಡೆಗಳ ಮೇಲೆ ಕುಳ್ಳಿರಿಸಿ ಕೊಂಡು ಶಿರಾಘ್ರಾಣಮಾಡಿ ಹರಸಿದರಂತೆ ಎಂದರು.

"ಹೋ ! ಹೋ ! ರಾಮಗಿರಿ ಶಿಖರವನ್ನು ಮುಟ್ಟಲು ಮೂವರು ತಮ್ಮಂದಿರಿಗೆ ಇನ್ನೈದಾರು ಮೆಟ್ಟಲುಗಳು ಉಳಿದಿವೆ ಎಂದು ಭಾವಿಸಿದ್ದೆ. ಈಗ ಎರಡು ಮೂರು ಹಂತಗಳನ್ನು ಏರಿದ್ದಾರೆ. ಉಳಿದವುಗಳನ್ನು ಏರಿ ಶಿಖರವನ್ನು ಮುಟ್ಟಲಿ" ಎಂದಳು ಮೈಥಿಲಿ. ಅದು ಮಾತ್ರ ಯಾವ ಕಾಲಕ್ಕೂ ಸಾಧ್ಯವಾಗುವುದಿಲ್ಲವೆಂದು ಸಹೋದರತ್ರಯರು ಹೇಳಿಬಿಟ್ಟರೆಂದು ಮಾಂಡವಿ ಊರ್ಮಿಳೆಯರು ಉಸುರಿದರು. ಎಲ್ಲವೂ ದೈವೇಚ್ಛೆಯಲ್ಲವೆ ಅಕ್ಕ ಎಂದು ಶ್ರುತಕೀರ್ತಿ ನುಡಿದಳು. ಹೌದೆಂದಳು ಜಾನಕಿ.

೬

# ಶತ್ರುಘ್ನ

'ರಾಮಾಯಣದಲ್ಲಿ ಭರತಖಂಡವು ಏನು ಹೇಳುತ್ತದೆ, ಯಾವ ಆದರ್ಶದ ಮಹತ್ವವನ್ನು ಸ್ವೀಕಾರ ಮಾಡುತ್ತದೆ ಎಂಬುದೇ ವಿಚಾರ ಮಾಡತಕ್ಕ ವಿಷಯ'.

ಒಂದು ಸಂಸಾರದ ಕಥೆಗೆ ಅತ್ಯಂತ ಮಹತ್ವವನ್ನು ಕೊಟ್ಟಿರುವುದೇ ರಾಮಾಯಣದಲ್ಲಿರುವ ಮುಖ್ಯ ವಿಶೇಷ. ರಾಮಾಯಣದ ಮಹಿಮೆಯು ತಂದೆಯ ಬಗ್ಗೆ ಮಗನಲ್ಲಿರುವ ವಿಧೇಯತೆ, ಅಣ್ಣನಿಗಾಗಿ ತಮ್ಮನ ಸ್ವಾರ್ಥ ತ್ಯಾಗ, ಗಂಡಹೆಂಡರಿಗೆ ಒಬ್ಬರಿಗೊಬ್ಬರಲ್ಲಿರುವ ನಿಷ್ಠೆ, ಮತ್ತು ಪ್ರಜೆಗಳ ವಿಷಯದಲ್ಲಿ ರಾಜನ ಕರ್ತವ್ಯ—ಇವುಗಳು ಎಷ್ಟುದೂರ ಹೋಗಬಲ್ಲುವು ಎಂಬುದನ್ನು ತೋರಿಸಿರುವುದರಲ್ಲಿದೆ. ಮುಖ್ಯವಾಗಿ ಸಂಸಾರದ ಸಂಬಂಧಗಳು ಈ ರೀತಿಯಾಗಿ ವರ್ಣನೀಯ ವಿಷಯಗಳೆಂದು ಮತ್ತಾವ ದೇಶದ ಮಹಾ ಕಾವ್ಯದಲ್ಲಿಯೂ ಪರಿಗಣಿತವಾಗಿಲ್ಲ. ಗೃಹಸ್ಥಾಶ್ರಮವೇ ಭರತಖಂಡದ ಆರ್ಯಸಮಾಜದ ತಳಹದಿ, ಆ ಗೃಹಸ್ಥಾಶ್ರಮದ ಧರ್ಮವನ್ನೇ ರಾಮಾ ಯಣವು ವಿಷಮಾವಸ್ಥೆಗೆ ಗುರಿಪಡಿಸಿ, ವನವಾಸ ದುಃಖದ ಮೂಲಕ ಅದಕ್ಕೆ ವಿಶೇಷ ಗೌರವವನ್ನು ತಂದು ಕೊಟ್ಟಿರುತ್ತದೆ. ಬಾಹುಬಲ, ಶತ್ರುಜಯ, ರಾಷ್ಟ್ರಗೌರವಗಳಿಗೆ ರಾಮಾಯಣವು ಮಹತ್ವವನ್ನು ಕೊಟ್ಟಿಲ್ಲ. ಶಾಂತ ರಸಾಶ್ರಯವಾದ ಗೃಹಸ್ಥಧರ್ಮಕ್ಕೆ ಕರುಣೆಯ ಕಣ್ಣೀರಿನಿಂದ ಅಭಿಷೇಕಮಾಡಿ ಅದನ್ನು ಮಹತ್ತಾದ ವೀರ್ಯದ ಮೇಲೆ ಪ್ರತಿಷ್ಠಿಸಿರುವುದು' (ಪ್ರಾಚೀನ ಸಾಹಿತ್ಯ, ಟಾಗೋರ್).

ಶ್ರೀರಾಮನನ್ನೂ ಲಕ್ಷ್ಮಣನನ್ನೂ ಸಕಲ ದೇವತೆಗಳೂ ಸ್ತೋತ್ರಮಾಡಿ "ಶ್ರೀರಾಮ, ಇನ್ನು ಅಯೋಧ್ಯೆಗೆ ಪ್ರಯಾಣಮಾಡು...ಅಯೋಧ್ಯೆಗೆ ಹೋಗಿ ನಿನಗಾಗಿ ಕಾದಿರುವ ಮಹಾತ್ಮನಾದ ಶತ್ರುಘ್ನನನ್ನೂ ನಿನ್ನ ಎಲ್ಲಾ ತಾಯಂದಿರನ್ನು ಸಂದರ್ಶಿಸು" ಎಂದರು. (ರಾಮನು ಕೇಳಿದ ವರಗಳನ್ನು

ಇಂದ್ರಾದಿ ದೇವತೆಗಳು ಅಗ್ನಿ ಪರೀಕ್ಷೆಯ ಸಮಯದಲ್ಲಿ ಸಲ್ಲಿಸಿದಾಗ ಹೇಳಿದ ವಚನವಿದು). (ಯು.ಸ. ೧೨೩ ಶ್ಲೋ. ೧೯).

ರಾಮಾಯಣದ ಕಾವ್ಯವಸ್ತು ಅಯೋಧ್ಯಾ ನಗರದ ಅರಮನೆಯ ಗೃಹಸ್ಥ ಜೀವನ. ಆ ಗೃಹದ ಸದಸ್ಯರು ತಂದೆ ದಶರಥ ಮಹಾರಾಜ, ತಾಯಂದಿರಾದ ಮೂವರು ರಾಣಿಯರು ಮತ್ತು ಮುನ್ನೂರೈವತ್ತು ಉಪ ಪತ್ನಿಯರು, ಕೌಸಲ್ಯೆಯ ಮಗ ಶ್ರೀರಾಮಚಂದ್ರ, ಸುಮಿತ್ರೆಯ ಮಕ್ಕಳಾದ ಲಕ್ಷ್ಮಣ ಶತ್ರುಘ್ನರು ಮತ್ತು ಕೈಕೇಯೀದೇವಿಯ ಮಗ ಭರತ. ಇವರಲ್ಲದೆ ಅರಮನೆಯ ರಾಜ ರಾಣಿಯರ ಸೇವಕರ ದಂಡು! ಮೇಲಾಗಿ ಪುರೋಹಿತ ವಸಿಷ್ಠರು. ಇವರೆಲ್ಲರೂ ಪರಸ್ಪರ ಅನುರಾಗ ಬಂಧಿತರಾಗಿ ತ್ಯಾಗಿಗಳಾಗಿ ಸಮರಸದ ಶಾಂತಜೀವನವನ್ನು ಧರ್ಮದ ಕಟ್ಟಿಗೆ ಒಳಪಟ್ಟು, ನಡೆಸುವುದೇ ಗೃಹಸ್ಥಾಶ್ರಮದ ಪರಮ ಗುರಿಯಾಗಿದೆ. ಕಾವ್ಯದ ಪಾತ್ರಗಳಾಗಿ ಈ ಎಲ್ಲರೂ ಕಂಡರಣೆಗೊಂಡಿದ್ದಾರೆ. ಅವರ ಗುಣಶೀಲಗಳನ್ನು ಪರಿಶೀಲಿಸಿ ಅವರ ಸ್ಥಾನಮಾನಗಳನ್ನು ನಿರ್ಣಯಿಸುವುದು ಸುಲಭವಲ್ಲ. ಇದಕ್ಕೆ ಕಾರಣ ಕವಿಯ ಕಲಾಕೌಶಲ.

೬

ಮೊಳಕೆಯಲ್ಲೇ ಮರದ ಬೆಳವಣಿಗೆಯನ್ನು ಕಾಣಬಹುದು. ಫಲವನ್ನು ನೋಡಿ ಮರವನ್ನು ಹೆಸರಿಸಬಹುದು. ಪಾತ್ರಗಳ ನಿರೂಪಣೆಗೆ ಈ ಎರಡು ವಿಧಾನಗಳಲ್ಲಿ ಎರಡನೆಯದನ್ನು ಹೆಚ್ಚಾಗಿ ಬಳಸಿಕೊಂಡಿದ್ದಾನೆ. ಪಾತ್ರದ ಬಾಲ್ಯ ಜೀವನವನ್ನು ಚಿತ್ರಿಸಿ ಅದರ ಭವಿಷ್ಯದ ಬಾಳನ್ನು ಗುರುತಿಸುವ ವಿಧಾನ ವ್ಯಕ್ತಗೊಂಡಿಲ್ಲ. ಕಾವ್ಯದ ನಾಯಕನಾದ ಶ್ರೀರಾಮನ ಮತ್ತು ಖಳನಾಯಕನಾದ ರಾವಣನ ಬಾಲ್ಯ ಜೀವನವನ್ನೇ ನಿರೂಪಿಸಿಲ್ಲ. ಮತ್ತೊಂದು ವಿಧಾನವೆಂದರೆ ವಿಶೇಷವಾಗಿ ಬಳಸಿರುವುದು, ಸಂದರ್ಭವನ್ನು ಸೃಷ್ಟಿಸಿ ಪಾತ್ರವನ್ನು ಹೆಸರಿಸಿ ಮೌನ ತಾಳುವುದು. ಈ ಕೌಶಲವು ಪ್ರಖರವಾಗಿ ವ್ಯಕ್ತಗೊಳ್ಳುವುದು ಶ್ರೀರಾಮನ ವನವಾಸದ ಅವಧಿಯಲ್ಲಿ, ಅಯೋಧ್ಯಾ ಅರಮನೆಯ ಗೃಹಸ್ಥ ಜೀವನದಲ್ಲಿ. ಈ ಜೀವನವು ಸೀತಾರಾಮರ ವನ ವಾಸದ ಮಹತ್ವಕ್ಕಿಂತ ಏನೂ ಕಡಿಮೆಯಾದದ್ದಲ್ಲ. ವನವಾಸ ಜೀವನದಲ್ಲಿ ಅವರು ಎದುರಿಸಬಹುದಾದದ್ದು ವನ್ಯಮೃಗಗಳು ಮತ್ತು ನಿಶಾಚರರ

ಹಾವಳಿ. ಪೌರುಷದಿಂದ ಬಗೆ ಹರಿಯುವಂಥದ್ದು. ಈ ಆರಮನೆಯ ಸಂಸಾರದಲ್ಲಿ ವ್ಯಕ್ತಿಗತವಾದ ದ್ವಂದ್ವಗಳೂ ಅರಿಷಡ್ವರ್ಗಗಳೂ ಅಹರ್ನಿಸಿ ಹೋರಾಡುತ್ತಲೇ ಇವೆ. ಇಂದ್ರಿಯ ನಿಗ್ರಹದಿಂದ ಸಂಸಾರದ ಗುರಿಯನ್ನು ಸಾಧಿಸಿ ಲೋಕಕಲ್ಯಾಣವನ್ನೆಸಗುವುದು ಅತಿ ಕಷ್ಟಕರವಾದದ್ದೆ ಸರಿ.

ಈ ಇಕ್ಷ್ವಾಕು ವಂಶದ ಕುಟುಂಬದಲ್ಲಿ ಶತ್ರುಘ್ನನೂ ಒಬ್ಬ ಸದಸ್ಯ. ಈತನು ದಶರಥ ಮತ್ತು ಸುಮಿತ್ರೆಯರ ಪುತ್ರ; ಲಕ್ಷ್ಮಣನ ಸ್ವಂತ ತಮ್ಮ; ಶ್ರೀರಾಮ ಭರತರ ಮಲತಮ್ಮ; ಕೌಸಲ್ಯೆ ಕೈಕೇಯಿಯರಿಗೆ ಸವತಿ ಮಗ. ತಾಯಿಯಾದ ಸುಮಿತ್ರೆ ತಪಸ್ವಿನಿ, ದೂರದರ್ಶಿನಿ, ತಂದೆಯ ಉಪ ಪತ್ನಿಯರಿಗೆ ಶತ್ರುಘ್ನನು ಯಾವರೀತಿ ಕಾಣಿಸಿಕೊಳ್ಳುತ್ತಿದ್ದನೊ ತಿಳಿಯದು. ಆದರೆ ಶ್ರೀರಾಮನು ಲಕ್ಷ್ಮಣ ಭರತರು ಗಳಿಸಿದ ಕೀರ್ತಿಗೆ ಭಾಗದಾರನೆಂದು ಹೇಳುವುದು ಉಚಿತವಾಗಿಯೂ ಧರ್ಮಬದ್ಧವಾಗಿಯೂ ಇದೆ. ಅವನು ಇಕ್ಷ್ವಾಕು ವಂಶಸ್ಥನೆಂದೂ ಶ್ರೀರಾಮನು ಲಕ್ಷ್ಮಣ ಭರತರ ಭ್ರಾತೃವೆಂಬುದನ್ನೂ ಮರೆಯಲಾಗದು.

ಶತ್ರುಘ್ನನು ರಾಮಾಯಣ ಪ್ರಿಯರಿಂದಲೂ ಸಾಹಿತಿಗಳಿಂದಲೂ ಅನಾದರಣೆಗೆ ಗುರಿಯಾಗಿರುವಂತೆ ತೋರುತ್ತದೆ. 'ರಾಮನ ಮೂವರು ಸೋದರರರಲ್ಲಿ ಶತ್ರುಘ್ನನ ಪಾತ್ರಕ್ಕೆ ಹೇಳುವಂತಹ ಔಚಿತ್ಯವಾವುದೂ ಇಲ್ಲ. ಅವನು ಭರತನ ತಮ್ಮ, ಸಂಗಡಿಗ, ಅಷ್ಟೆ. ಅವನ ಒಂದೇ ಪ್ರತಾಪದ ಸಂಗತಿ ಎಂದರೆ, ಮಂಥರೆಯನ್ನು ಕೂದಲು ಹಿಡಿದೆಳೆದು ತರುವುದು' (ಸಂಸ್ಕೃತಕಾವ್ಯ; ಡಾ. ಕೆ. ಕೃಷ್ಣಮೂರ್ತಿ ಪು. ೭೪) ರಾಮಾಯಣದ ಪಾತ್ರಗಳ ವ್ಯಕ್ತಿತ್ವವನ್ನು ತುಲನೆ ಮಾಡಬೇಕಾದರೆ ಕಾವ್ಯವನ್ನು ಪೂರ್ಣದೃಷ್ಟಿಯಿಂದ ಅವಲೋಕಿಸಬೇಕು. ಶ್ರೀ ಸೀತಾರಾಮರ ಧ್ಯೇಯ ಸಾಕ್ಷಾತ್ಕಾರಕ್ಕೆ ಯಾರಾರು ಯಾವ ಯಾವ ಕಾಣಿಕೆಯನ್ನು ಸಲ್ಲಿಸಿದ್ದಾರೆಂಬುದನ್ನು ನಿರ್ಧರಿಸುವುದರಲ್ಲಿ ಅವರ ನೈಜ ವ್ಯಕ್ತಿತ್ವವು ದೃಷ್ಟಿಗೋಚರವಾಗುತ್ತದೆ.

## ಮಹಾಭಾಗ್ಯದ ಹಸ್ತಕ್ಷೇಪ

ರಾಮಾಯಣ ಕಾವ್ಯದಲ್ಲಿ ಮಹದರ್ಥಗರ್ಭಿತವಾದ ಒಂದು ವಾಕ್ಯವಿದೆ.

'ದಶರಥನು ವಿಚಾರಶೀಲನಾದ್ದರಿಂದ ನ್ಯಾಯವನ್ನು ಪರ್ಯಾಲೋಚಿಸಿ ಅಮೃತೋಪಮವಾದ ಉಳಿದ ಭಾಗವನ್ನು ಮತ್ತೆ ಸುಮಿತ್ರೆಗೆ ಕೊಟ್ಟನು' (ಬಾ. ಸ. ೧೬. ಶ್ಲೋ ೨೮) ದಶರಥನು ಪುತ್ರಕಾಮೇಷ್ಟಿಯನ್ನು ಮಾಡಿದ ಸಮಯದಲ್ಲಿ ದಿವ್ಯ ಪಾಯಸವು ಲಭಿಸಿತು. ಅದರಲ್ಲಿ ಅರ್ಧಭಾಗವನ್ನು ಪಟ್ಟದ ರಾಣಿಯಾದ ಕೌಸಲ್ಯೆಗೂ, ಉಳಿದರ್ಧಭಾಗದಲ್ಲಿ ಅರ್ಧವನ್ನು ತಪಸ್ವಿನಿಯಾದ ಸುಮಿತ್ರೆಗೂ, ಅದರಲ್ಲಿ ಉಳಿದರ್ಧಭಾಗವನ್ನು ತನ್ನ ಪ್ರೀತಿಯ ರಾಣಿ ಕೈಕೇಯಿಗೂ ಕೊಟ್ಟಮೇಲೆ ಉಳಿದ ಅವಶೇಷವನ್ನು ಮತ್ತೆ ಸುಮಿತ್ರೆಗೆ ಕೊಟ್ಟ; ಅಂದರೆ ರೂಪಾಯಿಯ ಆರಾಣೆಭಾಗ ಸುಮಿತ್ರೆಗೆ ಸೇರಿತು.

ದಶರಥನ ಹಲವು ಪತ್ನಿಯರೊಳಗೆ ಮೂವರು ಮಾತ್ರ ಮಹಾರಾಣಿಯರು. ಅವರೊಳಗೆ ಕೌಸಲ್ಯೆ ಮೊದಲಿನವಳು. ಕೈಕೇಯಿ ಕೊನೆಯವಳು. ಮಧ್ಯದವಳೇ ಸುಮಿತ್ರೆ—ಶತ್ರುಘ್ನನ ತಾಯಿ. ಅಂದರೆ ಸವತಿ ಮಾತ್ಸರ್ಯದ ಸಂಸಾರಸ್ವರೂಪ. ರಾಜನಿಗೆ ಕಿರಿಯ ಪತ್ನಿಯ ಮೇಲೆ ಪರಮಪ್ರೇಮ. ಪಟ್ಟದರಾಣಿ ಉಪೇಕ್ಷಿತೆ. ಆದರಿಂದ ಮಾತ್ಸರ್ಯದ ಉರಿಗಿಚ್ಚು. ತಜ್ಜನಿತ ಅಶಾಂತಿ ಪತಿಗರ್ಪಿತ. ಸಹಧರ್ಮಚಾರಿಣಿಯಾದ ಸುಮಿತ್ರೆ ಮಚ್ಚರದ ಕಿಚ್ಚಿಗೆ ತುಪ್ಪವನ್ನು ಹುಯ್ಯದೆ ಶಮನಗೊಳಿಸುವ ಕ್ರಿಯಾಶಕ್ತಿಯಾಗಿ ಪತಿಗೆ ಅತಿಶಯವಾದ ಸೇವೆಯನ್ನು ಸಲ್ಲಿಸುತ್ತಿದ್ದಳು. ಅದರಿಂದ ಸುಪ್ರೀತನಾಗಿದ್ದ ದಶರಥ.

ಕೈಕೇಯಿಯ ವಿವಾಹ ಕಾಲದಲ್ಲಿ ಅವಳ ಹೊಟ್ಟೆಯಲ್ಲೇ ಹುಟ್ಟಿದ ಮಗನಿಗೆ ಪಟ್ಟಕಟ್ಟುತ್ತೇನೆಂದಿದ್ದ. ಅವಳನ್ನು ಅತಿಯಾಗಿ ಪ್ರೀತಿಸುತ್ತಿದ್ದುದರಿಂದ ಅವಳೊಬ್ಬಳಿಗೇ ದಿವ್ಯ ಪಾಯಸವನ್ನು ಕೊಡಬೇಕಿತ್ತು. ಹಾಗೆ ಮಾಡಲಿಲ್ಲ. ಕಾರಣ, ಪಟ್ಟದ ರಾಣಿಯನ್ನೂ ಪತಿ ಪರಾಯಣೆಯಾದ ಸುಮಿತ್ರೆಯನ್ನೂ ವಂಚಿಸಿದಂತಾಗುತ್ತದೆಯೆಂದು. ಕೈಕೇಯಿಯ ಮಗನಿಗೇ ರಾಜ್ಯಾಭಿಷೇಕ ಮಾಡುವ ಸಂದರ್ಭದಲ್ಲಿ ಪ್ರಜೆಗಳು ಪ್ರತಿಭಟಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಂತಾಗುತ್ತದೆ. ಪಿತೃವಿನ ಸ್ವಂತ ಆಸ್ತಿಗೆ ಅವನು ಅಧಿಕಾರಿಯಾಗುವನೆ ಹೊರತು ಪ್ರಜಾಪ್ರಭುತ್ವಕ್ಕಲ್ಲವೆಂದೂ ... ಆದ್ದರಿಂದ

ಕೌಸಲ್ಯೆಗೆ ಕೊಡಲೇ ಬೇಕಾಗುತ್ತದೆ ಆ ದಿವ್ಯ ಪಾಯಸವನ್ನು. ಅರಮನೆಯ ಶಾಂತಿಗಾಗಿ ಪತಿಯ ನೆಮ್ಮದಿಗಾಗಿ ಸ್ವಸುಖವನ್ನು ತ್ಯಾಗಮಾಡಿದವಳೂ, ಕಿರಿಯ ರಾಣಿಯು ಪ್ರೀತಿಗೆ ಪಾತ್ರಳಾದವಳೂ ಆದ ಸುಮಿತ್ರೆಗೆ ಆ ಪ್ರಸಾದ ವನ್ನು ಕೊಡದಿರುವುದು ಯಾವ ನ್ಯಾಯ? ಅವಳ ಸತೀತ್ವವನ್ನು ಮೆಚ್ಚಿ ಎರಡನೆಯ ವಿತರಣೆಯನ್ನು ಪಾರಿತೋಷಕವಾಗಿಯೇ ಕೊಟ್ಟ. ಇಲ್ಲಿದೆ ದಶರಥನ ವಿಚಾರವಂತಿಕೆ ಮತ್ತು ನ್ಯಾಯದೃಷ್ಟಿ.

ಮತ್ತೊಂದು ದೃಷ್ಟಿಯೂ ಅವನ ವೈಚಾರಿಕತೆಯನ್ನು ಆಕ್ರಮಿಸಿತ್ತು. ಮೃತ್ಯುವಿನ ಆಕ್ರಮಣವು ತೀವ್ರವಾಗಿ ರಾಜನ ಮೇಲೆ ಧಾಳಿಯಿಡುತ್ತಿತ್ತು; ಕೇವಲ ಇಪ್ಪತ್ತೇಳು ಇಪ್ಪತ್ತೆಂಟು ಸಂವತ್ಸರಗಳೇ ಉಳಿದಿದ್ದವು. ದಿವ್ಯ ಪ್ರಸಾದದಿಂದ ಜನ್ಮತಾಳುವ ಮಕ್ಕಳು ಸತ್ಪುತ್ರರಾಗದಿದ್ದಲ್ಲಿ ಪಡೆದದ್ದೂ ಅನಿಷ್ಟವೇ ಆಗುವುದಲ್ಲವೆ? ಮಾತೆಯಂತೆ ಮಕ್ಕಳೆಂದ ಮೇಲೆ ಸುಮಿತ್ರೆಯ ಹೊಟ್ಟೆಯಲ್ಲಿ ಹುಟ್ಟುವವರು ಸತ್ಪುತ್ರರಾಗುವ ಸಂಭವ ಪ್ರಬಲವಾಗಿದೆ ಎಂಬುದರಲ್ಲಿ ರಾಜನಿಗೆ ಪೂರ್ಣ ವಿಶ್ವಾಸವಿತ್ತು. ಅವಳಿ ಮಕ್ಕಳನ್ನು ಆ ಸಾಧ್ವಿಯು ಪಡೆಯಲೆಂದೇ ಅಂತರಾತ್ಮನ ಪ್ರೇರಣೆಯಿಂದ ಕೊಟ್ಟ. ಜನಿಸ ಬಹುದಾದ ನಾಲ್ವರು ಮಕ್ಕಳ್ಳೂಮಲ ಸಹೋದರರಂತಲ್ಲದೆ ಏಕ ಗರ್ಭೋ ದ್ಭವರಂತೆ ಬಾಳುವಂತೆ ವಿದ್ಯಾಬುದ್ಧಿಯನ್ನು ಕಲಿಸುವ ಶಕ್ತಿಯು ಸುಮಿತ್ರೆಗೆ ಇದೆ ಎಂದು ಪೂರ್ಣವಾಗಿ ನಂಬಿದ್ದ.

ಮಹಾ ಭಾಗ್ಯದ ಕೊಡುಗೆ ಅಲ್ಲಿಗೇ ನಿಲ್ಲಲಿಲ್ಲ. ದಾಶರಥಿಗಳ ವಿವಾಹ ಕ್ಷೇತ್ರವನ್ನೂ ಆಕ್ರಮಿಸಿತು. ಶ್ರೀರಾಮನು ಜಾನಕಿಯನ್ನೂ, ಅವನ ನೆರಳ ನಂತಿದ್ದ ಲಕ್ಷ್ಮಣನು ಜನಕನ ಔರಸ ಪುತ್ರಿ ಊರ್ಮಿಳೆಯನ್ನೂ, ಭರತನು ಕುಶಧ್ವಜನ ಹಿರಿಯ ಮಗಳಾದ ಮಾಂಡವಿಯನ್ನೂ, ಭರತನ ಛಾಯೆ ಯಂತಿದ್ದ ಶತ್ರುಘ್ನನು ಮಾಂಡವಿಯ ತಂಗಿಯಾದ ಶ್ರುತಕೀರ್ತಿಯನ್ನೂ ವಿವಾಹವಾದದ್ದು ಮಹದರ್ಥಪೂರ್ಣವಾಗಿದೆ. ಗೃಹಚ್ಛೇದವಾಗುವುದು ಸಾಮಾನ್ಯವಾಗಿ ಸ್ತ್ರೀಯರಿಂದಲೇ ಎನ್ನಬಹುದು. ಇಲ್ಲಿ ನಾಲ್ವರು ಓರಗಿತ್ತಿ ಯರೂ ಏಕ ಕುಟುಂಬದವರು. ಬಾಲ್ಯದಿಂದಲೂ ಒಬ್ಬರನ್ನೊಬ್ಬರು ಅರಿತು, ಆಡಿ, ಕೂಡಿ ಬೆಳೆದವರು. ಅಯೋಧ್ಯಾ ಅರಮನೆಯ ಭವಿಷ್ಯದ ಶಾಂತಿಗೆ

ಅದ್ಭುತವಾದ ಅಡಿಪಾಯ ಬಿದ್ದಿತು. ಸುಮಿತ್ರೆಗೆ ಒದಗಿದ ಇಬ್ಬರು ಬೀಗಿತಿಯರೇ ಕೌಸಲ್ಯೆ ಮತ್ತು ಕೈಕೇಯಿಯರಿಗೂ ಬೀಗಿತಿಯರಾದರು, ದಾಶರಥಿಗಳ ಮತ್ತು ತಮ್ಮ ಹೆಣ್ಣುಮಕ್ಕಳ ಭಾಗ್ಯೋದಯದಲ್ಲಿ ಎಲ್ಲರಿಗೂ ಸಮಪಾಲು ಸಿಕ್ಕಿತು.

**ಬಾಲಕ ಶತ್ರುಘ್ನ**

ದಶರಥನ ವೈಚಾರಿಕತೆಯು ಫಲಪ್ರದವಾಯಿತು. ತಪಸ್ವಿನಿಯಾದ ಸುಮಿತ್ರೆಯು ಲಕ್ಷ್ಮಣ, ಶತ್ರುಘ್ನರೆಂಬ ಅವಳಿ ಮಕ್ಕಳಿಗೆ ಜನ್ಮ ನೀಡಿದಳು. ತಾಯಿಗೆ ಕಿರಿಯ ಮಗನೂ ತಂದೆಗೆ ಹಿರಿಯ ಮಗನೂ ಪ್ರೇಮಪುತ್ಥಳಿಗಳು. ಶತ್ರುಘ್ನನೇ ಎಲ್ಲರಿಗಿಂತ ಕಿರಿಯವ. ಮಾತಾಪಿತೃಗಳ ಕಡುಮುಪ್ಪಿನಲ್ಲಿ ಹುಟ್ಟಿದವ. ಮಾತಾಪಿತೃಗಳ ಪುತ್ರ ವಾತ್ಸಲ್ಯಕ್ಕೆ ಗಗನದ ಮುಗಿಲೇ ಅಡ್ಡಿ. ಅವಳಿ ಮಕ್ಕಳ ಶೈಶವಾವಸ್ಥೆಯಲ್ಲಿ ತನ್ನ ಎರಡು ಮಕ್ಕಳಿಗೂ ಅಮೃತವನ್ನು ಧಾರೆಗರೆವಾಗ ಅವಳ ಇಂದ್ರಿಯ ನಿಗ್ರಹದ ವಜ್ರಕೋಟೆ ಪುಡಿ ಪುಡಿಯಾಗುತ್ತಿತ್ತು. ಅವರು ಮಗ್ಗುಲಾಗುವುದನ್ನೂ, ಉರುಳುವುದನ್ನೂ, ಅಂಬೆಗಾಲಿಕ್ಕುವುದನ್ನೂ, ಎದ್ದು ಬಿದ್ದು ಪುಟ್ಟಹೆಜ್ಜೆಗಳನ್ನಿಡುವುದನ್ನೂ, ತೊದಲು ಮಾತಾಡಿ ನಗೆಮಿಂಚುಗಳನ್ನು ಬೀರುವುದನ್ನೂ, ಚಂಡಿ ಹಿಡಿಯುವುದನ್ನೂ ಮುಪ್ಪಿನ ದಂಪತಿಗಳು ಎವೆಯಿಕ್ಕದೆ ಉಸಿರುಗಟ್ಟಿನೋಡಿ ಆನಂದಸಾಗರದಲ್ಲಿ ಮುಳುಗೇಳುತ್ತಿದ್ದರು. ಮೂರೈದು ವರ್ಷದ ಶೈಶವಾವಸ್ಥೆಯಲ್ಲಿ ದಾದಿಯರು ಅಗಲವಾದ ನೀರಿನ ತೊಟ್ಟಿಯಲ್ಲಿ ಶಶಿ ಸೂರ್ಯರ ಪ್ರತಿಬಿಂಬವನ್ನು ತೋರಿಸಿದಾಗ ಸಣ್ಣ ಸಣ್ಣ ಅಲೆಯೊಳಗೆ ಮುಳುಗೇಳುವ ಆ ಗಗನದ ಬೊಂಬೆಗಳು ಬೇಕೆಂದು ಅವರು ಕೇಳಿದಾಗ ಅವರ ಜ್ಞಾನಪಿಪಾಸೆಯನ್ನು ತಣಿಸಲಾರದಾದರು. ಸುಮಿತ್ರೆಗೆ ಬಲವಂತದ ಮೌನಮುದ್ರೆ. ಬಾಲಕೇಳಿ ಪ್ರಾರಂಭವಾದ ಮೇಲೆ ಸುಮಿತ್ರೆ ತನ್ನ ಸರಳ ನಡೆನುಡಿಗಳಿಂದಲೇ ವಿದ್ಯಾಭ್ಯಾಸವನ್ನು ಮಕ್ಕಳಿಗೆ ಮಾಡಿಸತೊಡಗಿದಳು. ಮಕ್ಕಳಿಗೆ ಮಾತೆಯೇ ಮೊಟ್ಟಮೊದಲ ಗುರುವೆಂಬುದನ್ನು ಪೂರ್ಣವಾಗಿ ವ್ಯಕ್ತಗೊಳಿಸಿದಳು. ಕಥೆ ಕೇಳುವ ಕುತೂಹಲವನ್ನು ಅವರಲ್ಲಿ ಕೆರಳಿಸಿದಾಗ ಸುಮಿತ್ರೆಗೆ ಬಿಡುವೇ ಇಲ್ಲ. ಆಟಗಳಲ್ಲಿ ಸಾಕಷ್ಟು ಆಸಕ್ತಿಯನ್ನು ಹುಟ್ಟಿಸುವುದೂ ತಾಯಿಯ ಪಾಲಿಗೇ ಸೇರಿತ್ತು. ಕ್ರೀಡಾಶೀಲರಾದಾಗ ಶ್ರೀರಾಮ ಭರತರೂ ಕೂಡಿಕೊಳ್ಳುತ್ತಿದ್ದರು. ಆಟ

ಗಳಲ್ಲಿನ ಸೋಲು ಗೆಲುವುಗಳು ಈರ್ಷ್ಯೆಯ ಮೂಲ. ಬಲಮಕ್ಕಳೆಂಬ ಅರಿವು ಇದ್ದರೆ ದಾಯಾದ ಮಾತ್ಸರ್ಯ ಜನಿಸಿ ಸವತಿ ಮಾತ್ಸರ್ಯಕ್ಕೆ ಹೋಯ್ ಕಯ್ಯಾಗಿ ನಿಲ್ಲುವಂಥದ್ದು. ಜನ್ಮತಃ ಆ ನಾಲ್ವರಲ್ಲಿ ದುರ್ಭಾವನೆಗಳು ಇರಲಿಲ್ಲ. ಇಲ್ಲದಿದ್ದರೂ ಸಂದರ್ಭೋಚಿತವಾಗಿ ಮೊಳೆಯಬಹುದಲ್ಲವೆ ? ಆದ್ದರಿಂದ ನಾಲ್ವರೂ ಕ್ರೀಡಾಸ್ಪರ್ಧೆಗಳಲ್ಲಿ ಸೋತು ಗೆಲ್ಲುತ್ತಿದ್ದರು. ಸುಮಿತ್ರೆಯು ದಾಶರಥಿಗಳಿಗೆ ತಿದ್ದಿ ಹಾಕಿದ ಓನಾಮ ಇದು. ಶತ್ರುಘ್ನನು ದೇಹದಾರ್ಢ್ಯದಲ್ಲಿ ಒಂದು ಕೈ ಮೇಲು. ಕ್ರೀಡಾತಂತ್ರವನ್ನು ಚನ್ನಾಗಿ ಕಲಿತು ಪರರನ್ನು ಗೆಲ್ಲುವಂತೆಯೂ ಸಹೋದರರಲ್ಲಿ ಸೋಲುವಂತೆಯೂ ವ್ಯಕ್ತಿತ್ವವನ್ನು ಬೆಳೆಸಿ ಕೊಂಡ. ಕ್ಷತ್ರಿಯರು ಅಗತ್ಯವಾಗಿ ಕಲಿಯಬೇಕಾದ ಶಸ್ತ್ರಾಸ್ತ್ರ ವಿದ್ಯೆಯಲ್ಲೂ ಆಸಕ್ತಿ ವಹಿಸಿದ್ದ. ಬೇಟೆಯಾಡುವುದರಲ್ಲೂ ಸಮರ್ಥನಾಗುತ್ತಿದ್ದ. ಅಲ್ಲಿಯೂ ಅಣ್ಣಂದಿರಿಗೇ ಸೋತು ನಡೆಯುವುದೇ ಅವನ ಗುರಿ ; ಮಾತೆ ಕಲಿಸಿದ ಪಾಠ. ಕಲೆಯಲ್ಲೂ ಆಸಕ್ತಿ ಬೆಳೆಯುತ್ತಿತ್ತು. ಕತೆ ಕೇಳುವಾಗ ನಾಲ್ವರೂ ಸಹ ಪಾಠಿಗಳೇ. ದೇವತೆಗಳ, ಋಷಿಗಳ, ಮಹಾತ್ಮರ, ರಣಕಲಿಗಳ ಕಥೆಗಳನ್ನು ಅಷ್ಟಾಗಿ ಬಯಸುತ್ತಿರಲಿಲ್ಲ. ತಮ್ಮ ಇಕ್ಷ್ವಾಕು ವಂಶೀಕರ ಚರಿತ್ರೆಯನ್ನು ಕಿವಿಗೊಟ್ಟು ಕೇಳಿ ಅವರ ನ್ಯಾಯಾನ್ಯಾಯ ಧರ್ಮಾಧರ್ಮ ಕೃತ್ಯಗಳ ಬಗೆಗೆ ನಾಲ್ವರೂ ತೀಕ್ಷ್ಣವಾದ ವಾಗ್ವಾದವನ್ನು ಹೂಡುತ್ತಿದ್ದರು. ತನಗೆ ತಿಳಿಯದ ರಘುವಂಶೀಯರ ವಿಷಯವಾಗಿ ಸುಮಿತ್ರೆ ವಸಿಷ್ಠ ಮತ್ತು ಸುಮಂತ್ರರ ಶಿಷ್ಯಳಾಗಿ ಆಮೇಲೆ ಮಕ್ಕಳಿಗೆ ಗುರುವಾಗಿ ವರ್ತಿಸುತ್ತಿದ್ದಳು. ವಂಶ ಗೌರವವು ಅವರಲ್ಲಿ ಉಕ್ಕಿ ಹರಿಯಿತು. ಸಮಾಜದ ಉತ್ಸವಗಳಲ್ಲಿಯೂ ನಾಲ್ವರೂ ಪಾಲ್ಗೊಳ್ಳುತ್ತಿದ್ದರು. ಭ್ರಾತೃವಾತ್ಸಲ್ಯಕ್ಕಿಂತ ಸ್ನೇಹವು ಮಹತ್ವ ಪೂರ್ಣವಾದದ್ದೆಂದು ತಿಳಿಯುತ್ತಾ ಬಂದರು. ಶತ್ರುಘ್ನನು ಮಿತಭಾಷಿ ; ಆದರೆ ಕ್ರಿಯಾಶೀಲ. ಅರಮನೆಯ ಎಲ್ಲಾ ಮಾತೆಯರ ಪ್ರೀತಿಗಳಿಸುವುದರಲ್ಲಿ ನಾಲ್ವರಿಗೂ ಬಿಡುವಿಲ್ಲದ ಮೇಲಾಟ ದಾಶರಥಿಗಳಿಂದ ಅರಮನೆ ಸ್ತ್ರೀಯರಿಗೆ ನಂದನವನವೇ ಸೃಷ್ಟಿಯಾಯಿತು. ಅಣ್ಣಂದಿರ ಹಿಂದೆಯೇ ಮೌನವಾಗಿ ಗಜ ಗಾಂಭೀರ್ಯದಿಂದ ನಡೆಯುತ್ತಿದ್ದುದೇ ಮಾತೆಯರಿಗೆ ಶತ್ರುಘ್ನನು ಹಾಕು ತ್ತಿದ್ದ ಮೋಡಿ. ಹದಿನೈದು ಹದಿನಾರು ವರ್ಷದವರಾಗುವ ಸಮಯಕ್ಕೆ [illegible] ಅದರ ಕೀರ್ತಿಯನ್ನು ಮತ್ತಷ್ಟು [illegible]ವನ್ನು [illegible]

ಬೆಳೆಸಬೇಕೆಂಬುದೂ, ನಾಲ್ವರೂ ಏಕೀಭವಿಸಿ ನಡೆದುಕೊಂಡರೆ ಅದು ಸಾಧ್ಯವೆಂದೂ, ಅದೇ ಅವರ ಜೀವನದ ಗುರಿಯೆಂದೂ ಅರಿತುಕೊಂಡರು. ಬಂಧು ಬಳಗದವರ ಮನೆಗಳಿಗೆ ಹೋದಾಗಲೂ ಶತ್ರುಘ್ನನ ಮೌನವೇ ಆಕರ್ಷಣೀಯವಾಗಿರುತ್ತಿತ್ತು.

### ಕ್ಷಾತ್ರೋತ್ಸಾಹ ಭಂಗ

ದಶರಥ ಮತ್ತು ಅವನ ರಾಣಿಯರಿಗೆ ತಮ್ಮ ಜೀವಿತ ಕಾಲದಲ್ಲೇ ಮೊಮ್ಮಕ್ಕಳನ್ನು ನೋಡಬೇಕೆಂಬ ಕಡುಬಯಕೆ. ಮಹಾವೃದ್ಧನಾದ ರಾಜನೀದ ಪ್ರಜಾಪರಿಪಾಲನೆ ಸ್ವರ್ಗಸದೃಶವಾಗಿರಲಿಲ್ಲ, ಆದ್ದರಿಂದ ಶ್ರೀರಾಮನು ಸಂಸಾರಿಯಾಗಿ ಜನಗಳ ಸುಖದುಃಖದ ಅರಿವು ಉಂಟಾಗಲೆಂಬ ಆಶಯ ಆದಾಗಬೇಕಾದರೆ ಜ್ಯೇಷ್ಠಪುತ್ರನಾದ ಶ್ರೀರಾಮನಿಗೆ ವಿವಾಹವಾಗಬೇಕು ತಾನೆ? ಆ ದಿಕ್ಕಿನಲ್ಲೇ ದಶರಥನು ಆಲೋಚನೆ ಮಾಡುತ್ತಿದ್ದ. ತತ್ಸಮಯದಲ್ಲಿ ಮಹಾ ಕ್ಷತ್ರಿಯ ಬ್ರಾಹ್ಮಣನಾದ ಚಂಡಕೌಶಿಕನು ಬಂದ. ತಾನೊಂದು ಯಜ್ಞಮಾಡುತ್ತಿರುವೆನೆಂದೂ ಅದನ್ನು ಭಂಗಮಾಡಲು ರಾವಣನ ಕಡೆಯವರು ಹವಣಿಸುತ್ತಿರುವರೆಂದೂ, ಅವರ ಪೀಡೆಯನ್ನು ತಪ್ಪಿಸಲು ಶ್ರೀರಾಮನೊಬ್ಬನಿಗೇ ಸಾಧ್ಯವಾದದ್ದರಿಂದ ಅವನನ್ನು ಹತ್ತು ದಿನಗಳವುಟ್ಟಿಗೆ ಕಳಿಸಿಕೊಡೆಂದ. ಅವನಿನ್ನೂ ಬಾಲಕ, ತಾನೇ ಸೇನಾಸಮೇತ ಬರುತ್ತೇನೆಂದು ರಾಜ ಹೇಳಿದ್ದನ್ನು ಕೇಳಿ ವಿಶ್ವಾಮಿತ್ರರು ಕುಪಿತರಾದರು. ಕುಲಪುರೋಹಿತರ ಹಿತೋಕ್ತಿಗಳಿಗೆ ಕಿವಿಗೊಟ್ಟು ಒಪ್ಪಿದ. ಲಕ್ಷ್ಮಣನೂ ಜತೆಗೂಡಿದ. ತಾಯಂದಿರ ಪಾದ ಮುಟ್ಟಿ ಆಶೀರ್ವಾದ ಪಡೆಯಲು ರಾಮಲಕ್ಷ್ಮಣರು ಬಂದಾಗ ಶತ್ರುಘ್ನನಿಗೆ ಹೇಳಲಾರದ ನೋವು ಉಂಟಾಯಿತು. ರಾಮಲಕ್ಷ್ಮಣರನ್ನು ಕಳಿಸಲು ಇಷ್ಟವಿಲ್ಲದಿದ್ದರೆ ತನ್ನನ್ನಾದರೂ ಕಳಿಸಬಹುದಿತ್ತಲ್ಲ. ತನ್ನ ಪರಾಕ್ರಮವು ಲೋಕಕ್ಕೆ ವ್ಯಕ್ತವಾಗುತಿತ್ತಲ್ಲ ಎಂದು ಮರುಗಿದನು. ಶ್ರೀರಾಮನೊಬ್ಬನಿಂದಲೇ ರಾಕ್ಷಸರ ವಧೆ ಸಾಧ್ಯವೆಂದಮೇಲೆ ತನಗೇನು ಹಕ್ಕಿದೆ ಪ್ರಶ್ನಿಸುವುದಕ್ಕೆ, ತನ್ನ ಅರ್ಹತೆಯಲ್ಲಿ ಯಾವ ಕುಂದಿದೆಯೊ ಅರಿವಾಗಲೊಲ್ಲದಲ್ಲ ಎಂದು ಮರುಗಿದನು. ಸುಮಿತ್ರೆಯು ಸಮಾಧಾನ ಪಡಿಸಿದಳು. "ವತ್ಸ, ನಿನಗೂ ನಿನ್ನ ಅರ್ಹತೆಗೆ ತಕ್ಕಂತೆ ಕಾಲಕ್ರಮದಲ್ಲಿ ಸುಕ್ಷೇತ್ರ ಒದಗ

ಬಹುದು. ವಿಶ್ವಾಮಿತ್ರರು ತ್ರಿಕಾಲದರ್ಶಿಗಳು. ಅವರು ನಿಮ್ಮ ನಾಲ್ವರಿಂದಲೂ ಲೋಕಕಲ್ಯಾಣ ಯಜ್ಞವನ್ನು ಮಾಡಿಸುವರು " ಎಂದು ಸಮಾಧಾನ ಪಡಿಸಿದಳು.

ಮಹಾ ವೃದ್ಧಾಪ್ಯದ ದೆಶೆಯಲ್ಲಿದ್ದ ಮಾತಾಪಿತೃಗಳು ಆ ನಾಲ್ವರು ಮುದ್ದು ಮಕ್ಕಳನ್ನು ತೌರುಮನೆಗಳಿಗೆ ಬಹಳ ದಿನಗಳಿರುವಂತೆ ಕಳಿಸುತ್ತಿರಲಿಲ್ಲ. ಕೈಕೇಯಿಯ ಸಹೋದರ ಯುಧಾಜಿತ್ತುವಿಗೆ ಸೋದರಳಿಯನಾದ ಭರತನ ಮೇಲೆ ಅತಿ ಪ್ರೀತಿ. ಆದರೂ ವಿಶ್ವಾಮಿತ್ರ ಬಂದ ಸಂದರ್ಭದಲ್ಲಿ ಮಾತ್ರ ಭರತ ಶತ್ರುಘ್ನರು ಅಯೋಧ್ಯೆಯಲ್ಲೇ ಇದ್ದರು. ಶ್ರೀರಾಮನು ಹೊರಟ ಹದಿನೈದು ದಿನಗಳೊಳಗಾಗಿ ಜನಕಮಹಾರಾಜನಿಂದ ಕರೆ ಬಂದಿತು. ಶ್ರೀರಾಮನ ಕಲ್ಯಾಣದ ಮಹಾಸುದ್ದಿ. ದಶರಥನು ಪರಿವಾರ ಸಮೇತ ಹೊರಟ. ಭರತ ಶತ್ರುಘ್ನರು ರಾಜಗೃಹದಲ್ಲಿದ್ದಿದ್ದರೆ ಅವರನ್ನು ಕರೆದುಕೊಂಡು ಬರುವ ಸಂದರ್ಭದಲ್ಲಿ ಮದುವೆಯ ಸುದ್ದಿಯನ್ನು ಯುಧಾಜಿತ್ತುವಿಗೂ ತಿಳಿಸುತ್ತಿದ್ದ. ಆದ್ದರಿಂದಲೇ ಭರತನನ್ನು ಕರೆದುಕೊಂಡು ಹೋಗಲು ಅವನು ಅಯೋಧ್ಯೆಗೆ ಬಂದಾಗ, ಅರಮನೆಯವರೆಲ್ಲಾ ಮಿಥಿಲೆಗೆ ಹೋಗಿದ್ದಾರೆಂದು ಯುಧಾಜಿತ್ತು ತಿಳಿದು ತಾನೂ ಮಿಥಿಲೆಗೆ ಹೋಗಿ ಮದುವೆ ಮುಗಿಸಿಕೊಂಡು ಅಯೋಧ್ಯೆಗೆ ಹಿಂದಿರುಗಿ ಕಾದು ಭರತ ಶತ್ರುಘ್ನರನ್ನೂ ಅವರ ನವಸತಿಯರನ್ನೂ ಕರೆದುಕೊಂಡು ಹೋದದ್ದು. ಭರತಾನುಜನ, ದುಗುಡ ಮಾಯವಾಯಿತು ; ನವಶೋಭೆ. ಬಾಳಿನ ತಿರುವು.

### ವೈಯಕ್ತಿಕ ವಿವಾಹವೊ, ಲೋಕ ಕಲ್ಯಾಣವೊ ?

ಈ ಬಾಲ್ಯಾವಸ್ಥೆಯಲ್ಲಿ ಲಕ್ಷ್ಮಣನು ರಾಮಾನುಜನೆಂಬ ಬಿರುದನ್ನು ಶತ್ರುಘ್ನನು ಭರತಾನುಜನೆಂಬ ನಾಮಾಂಕಿತವನ್ನೂ ಗಳಿಸುವ ಸದವಕಾಶ ಸಿಕ್ಕಿತು. ಹಾಗೆಯೇ ಜೋಡಿಯಾಗಿ ನಡೆದರು. ಶ್ರೀರಾಮನು ಹೋದದ್ದು ಯಾವ ಕಾರ್ಯಕ್ಕೆ, ಈಗ ಬಂದಿರುವ ಸುದ್ದಿಯೇನು ? ಆಶ್ಚರ್ಯಕರವಾಗಿದೆಯಲ್ಲ ? ಋಷಿಗಳು ಮಾಟಗಾರರೊ ಏನೊ ಎಂದು ಆನಂದಚಕಿತನಾದನು ಶತ್ರುಘ್ನ. ಸಡಗರದ ವಿಜಯಯಾತ್ರೆ. ನಾನಾ ಪ್ರದೇಶಗಳ ಮುಖಾಂತರ ; ಬಗೆಬಗೆಯ ಉಡುಪುಗಳನ್ನು ಧರಿಸಿದ ದೇಶೀಯರ ದರ್ಶನ ; ಪ್ರಕೃತಿಯ

ಮನಮೋಹಕ ದೃಶ್ಯ; ಸಂಗಡಲೇ ನಾನಾ ತರಹದ ವಿಚಾರಧಾರೆಗಳು. ಮುಟ್ಟಿದರು ಮಿಥಿಲೆಯನ್ನು. ಜನಕನ ಆತಿಥ್ಯವು ಅಸದೃಶವಾಗಿತ್ತು.

ಯಜ್ಞದ ಸೋಗು; ವಿವಾಹದ ವಿಜೃಂಭಣೆ; ಎಂದೂ ಕಾಣದ ಋಷಿಗಳ, ಬ್ರಾಹ್ಮಣರ ಗಡಣ; ರಾಜರುಗಳ ಸಾಲು; ಸ್ತ್ರೀಯರ ಕೋಕಿಲ, ಕಿಂಕಿಣಿಯ ರವ; ಮನ ಸೆಳೆಯುವ ಮಿಂಚುಗಳು. ಮನದಣಿಯುವ ಈ ದೃಶ್ಯದಲ್ಲಿ ಶತ್ರುಘ್ನನ ಮೌನಮುದ್ರೆ ಸಾಧಾರಣವಾಗಿ ಗಂಭೀರವಾಗಿಯೇ ಇತ್ತು. ಭರತನ ಪಕ್ಕದಲ್ಲೇ ಇದ್ದ. ವೈವಾಹಿಕ ವಿಧಿಗಳಿಗೆ ತಾನೂ ಮಣೆಯೆ ಬೇಕಾದ ಸಂದರ್ಭ ಬಂದಾಗ ದಿಗ್ಭ್ರಮೆಗೊಂಡನು. ಶ್ರೀರಾಮನ ಕಲ್ಯಾಣ ವೇನೊ ಉಚಿತವೆನಿಸಿತು. ಆದರೆ ಲಕ್ಷ್ಮಣ ಭರತ ಮತ್ತು ತನ್ನದು? ಆಗ ಮೂಡಿದ ದಿಗ್ಭ್ರಮೆ ಮತ್ತಷ್ಟು ವಿಸ್ತಾರಗೊಂಡಿತು. ಆ ಸಂದರ್ಭದಲ್ಲೇ ಶತಾನಂದರು ವಿಶ್ವಾಮಿತ್ರರ ಪೂರ್ವೋತ್ತರವನ್ನು ವಿವರಿಸಿದ್ದನ್ನು ಕೇಳಿ ಅವರ ಮಹತ್ತಿನಿಂದ ಪ್ರಭಾವಿತನಾದನು. ಪೂಜ್ಯಭಾವನೆ ಹೃದಯವನ್ನಾ ಕ್ರಮಿಸಿತು. ಅಂತರ್ಯದಲ್ಲೇ ಶತಬಾರಿ ವಂದಿಸಿದನು. ಶ್ರೀರಾಮನ ವೈಶಿಷ್ಟ್ಯ ವನ್ನು ಗುರುತಿಸಿದ ಮಹಾಮಹಿಮನೇ ಸರಿಯೆಂದು ಭಾವಪೂರ್ಣನಾದನು. ತಂದೆತಾಯಿಗಳೂ ಮೇಲಾಗಿ ವಸಿಷ್ಠ ವಿಶ್ವಾಮಿತ್ರ ಶತಾನಂದ ಋಷಿಗಳೂ ಮೆಚ್ಚಿ ಒಪ್ಪಿದ ಜೀವನದ ಸಂಗಾತಿಯನ್ನು ಕೈಹಿಡಿದ. ಅವನ ಆನಂದದ ಅಭಿವ್ಯಕ್ತಿಗೆ ಹಿತಮಿತವಾದ ಮೌನದ ಬಂಧನವಿತ್ತು. ತನ್ನ ಅತಿ ಗಾಂಭೀ ರ್ಯವು ತನ್ನ ಹೃದಯೇಶ್ವರಿಗೆ ವಿಹ್ವಲತೆಯನ್ನೊಡ್ಡುವುದೊ ಎಂಬ ಸಂದೇಹವೂ ಭರತಾನುಜನಿಗಿತ್ತು. ಆದರೆ ಮಹಾರಾಜನ ನಾಲ್ಕು ಜನ ಸೊಸೆಯಂದಿರೂ ಸೋದರಿಯರಾಗಿದ್ದದ್ದು ಬೆರಗುಗೊಳಿಸಿತು. ದೈವ ಪ್ರಭಾವದ ವಿಷಯವಾಗಿ ಸುಮಿತ್ರೆ ಆಗಾಗ್ಯೆ ಹೇಳುತ್ತಿದ್ದುದರ ದೃಶ್ಯ ಗೋಚರವಾಯಿತು. 'ಕುಶಲಮತಿಯ' ಶತ್ರುಘ್ನ ತನಗೆ ಚಲುವಿನ ಚದುರೆ ಕೈಹಿಡಿದಳೆಂದು ತಿಳಿದ. ಚತುರತೆ ರಸಿಕತೆಯ ದಾಂಪತ್ಯ ಬಂಧನ! ಋಷಿಗಳ ಮುಖ್ಯವಾಗಿ ವಿಶ್ವಾಮಿತ್ರರ ನಿರ್ಗಮನ. ರಾಜೋರ್ಜಿತವಾದ ವೈಭವದ ಕೊಡುಗೆ, ಆನಂದದ ಬೀಳ್ಕೊಡುಗೆ. ಆದರೇನು ಅತ್ತೆ ಮಾವಂದಿರ ಮತ್ತು ಅಕ್ಕತಂಗಿಯರ ಕಣ್ಣಲ್ಲಿ ನೀರು ಬಟ್ಟಾಡುತ್ತಿದ್ದುದನ್ನು ನೋಡಲೇ

ಬೇಕಾಗಿ ಬಂತಲ್ಲ ? ಮಾನವೀಯತೆಯಿಂದ ವೀಕ್ಷಿಸಿಯೇಬಿಟ್ಟ ಸುಮಿತ್ರೆಯ ಕುಮಾರ.

ಅಯೋಧ್ಯಾಭಿಮುಖದ ಪ್ರಯಾಣ ಬೆಳೆಯಿತು. ಲೋಕಕಲ್ಯಾಣೋತ್ಸವದ ವೈಜಯಂತವೆಲ್ಲಿ ? ಅದರ ಮೇಲೆ ಆಕ್ರಮಣ ಮಾಡುತ್ತಿರುವ ಹೆಪ್ಪುಗಟ್ಟಿದ ಕಪ್ಪು ಮೋಡದ ಆಕ್ರಮಣವೇನು ? ಕೃತ್ರಿಮ ಗುಡುಗು, ಮಿಂಚು ! ಅದರ ಗರ್ಭದಿಂದ ಕೋದಂಡಪಾಣಿಯಾದ ಭಯೋತ್ಪಾದಕ ಜಟಾಧಾರಿ. ಪಿತನು ಪರಶುರಾಮನಿವನೆಂದೂ ಕ್ಷತ್ರಿಯ ಕುಲನಾಶಕನೆಂದೂ ತಿಳಿದು ಮೂರ್ಛೆಗೊಂಡ. ಸ್ತ್ರೀವೃಂದವು ಮುಸುಕುಹಾಕಿಕೊಂಡಿತು. ಶತ್ರುಘ್ನನು ಎಚ್ಚರದಪ್ಪದೆ ವೀಕ್ಷಿಸುತ್ತಿದ್ದ. ನಿರ್ಭೀತನಾಗಿ ಎದೆ ಚಾಚಿ ಬಿಲ್ಲನ್ನು ಹಿಡಿದು ನಿಂತಿದ್ದ ಕುಮಾರಧರ ಶ್ರೀರಾಮನ ಎದುರಿಗೆ ನಿಂತು ಕಾಳಗದ ಕರೆಗೊಟ್ಟ. ಈರ್ವರೂ ಪೌರುಷ ವಾಗ್ಬಾಣಗಳನ್ನು ಚಿಮ್ಮಿಸುತ್ತಿದ್ದಾಗ ಶತ್ರುಘ್ನನೂ ಕೋದಂಡಪಾಣಿಯಾಗುತ್ತಿದ್ದ. ಶ್ರುತಕೀರ್ತಿಯ ಕಣ್ಮಿಂಚಿನಿಂದ ಪ್ರಚೋದಿತನಾದ. ಆತ್ಮಗೌರವದ ಪ್ರತಿಷ್ಠೆ ಚಿರಸ್ಥಾಯಿಯಾಯಿತು. ಆ ಬಡ ಧನುರ್ಧಾರಿ ಶ್ರೀರಾಮನನ್ನೇ ಏಕೆ ಆಹ್ವಾನಿಸಿದ ? ನಾವುಮೂವರು ಎಳೆಯುವರೆಂದ್ವೆ? ಭೀರುಗಳೆಂದೆ ? ತಂದೆ ಅವನನ್ನು ನೋಡಿ ಮೂರ್ಛಿತನಾಗಬೇಕಿದ್ದರೆ ಅವನು ಮಹಾ ಮಾನವದ್ವೇಷಿಯಾಗಿರಬೇಕು. ಮಾಡುವುದೇನು? ಸರ್ವರ ರಕ್ಷಕನೂ ಶ್ರೀರಾಮನಲ್ಲವೆ? ಅವನೇ ಗುರುವಲ್ಲವೆ, ಮುಂದಿನ ರಾಜನಲ್ಲವೆ, ಹಿರಿಯಣ್ಣನಲ್ಲವೆ ? ತಾನು ಆಜ್ಞಾಧಾರಕನಾಗಿಯೇ ನಡೆದುಕೊಳ್ಳಬೇಕೆಂದು ಚಚ್ಚರಿಗನಾಗದೆ ಎಚ್ಚರದಿಂದಿದ್ದನು. ಪರಶುರಾಮನ ಪರಾಭವವನ್ನು ವೀಕ್ಷಿಸಿದ ಅಯೋಧ್ಯಾ ನಿವಾಸಿಗಳೆಲ್ಲಾ ಹರ್ಷಭರಿತರಾಗಿ ಅಯೋಧ್ಯೆಯತ್ತ ಕ್ರಮಿಸಿದರು. ಸೊಸೆಯರನ್ನು ಪಡೆದ ಅತ್ತೆಯಂದಿರು ನವದಂಪತಿಗಳ ಸಂಭ್ರಮದ ಸ್ವಾಗತವನ್ನು ಏರ್ಪಡಿಸಲು ತ್ವರಿತವಾಗಿ ಮುಂದೆ ನಗರಿಗೆ ಪ್ರಯಾಣ ಬೆಳೆಸಿದರು. ಸೊಸೆಯಂದಿರನ್ನು ಕಂಡರೆ ಅತ್ತೆಯಂದಿರಿಗೆ ಎಂಥ ಆನಂದ, ಆದರ ! ಆನಂದದ ಹಡಗು ದಡವನ್ನು ಮುಟ್ಟಿತು. ನವದಂಪತಿಗಳು ನಗರದ ದೇವಸ್ಥಾನಗಳಿಗೆ ಹೋಗಿ ಭಕ್ತಿಪೂರ್ವಕವಾದ ಪ್ರಣಾಮಗಳನ್ನರ್ಪಿಸಿ ತದನಂತರ ಅರಮನೆಯ ಹಿರಿಯರಿಗೆ, ಗುರುಗಳಿಗೆ

ಸಕಲ ವಣಾತೆಯರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಹಾಕಿ ತಮ್ಮ ತಮ್ಮ ಸ್ವಗೃಹಗಳನ್ನು ಸೇರಿದರು. ಶತ್ರುಘ್ನನು ತನ್ನ ಮಂದಗಮನೆಗೆ ಜೋಡಿಯಾಗೇ ಗಜಗಮನನಾಗಿ ತನ್ನರಮನೆಯನ್ನು ಸೇರಿದನು. ನವದಂಪತಿಗಳು ತಾರುಣ್ಯದ ಗುಂಗಿನಲ್ಲಿ ವಿಹರಿಸಲು ದಶರಥನು ಸಕಲ ಸಿದ್ಧತೆಗಳನ್ನು ಕ್ಷಿಪ್ರದಲ್ಲೇ ಏರ್ಪಡಿಸಿದ. ಆದರೇನು ? ಯುಧಾಜಿತು, ಭರತನ ಸೋದರಮಾವ ರಾಜಗೃಹಕ್ಕೆ ಕರೆದುಕೊಂಡು ಹೋಗಲು ಹಿಂಬಾಲಿಸಿಯೇ ಮಿಥಿಲೆಯಿಂದ ಬಂದು ಅರಮನೆಯಲ್ಲಿ ಕಾದು ಕುಳಿತಿದ್ದಾನಲ್ಲ! ಬಾಲ್ಯಾವಸ್ಥೆಯಲ್ಲಿ ಕೈಕಾದೇವಿಯ ತೌರಿಗೆ ಭರತನ ಸಂಗಡ ಹೋಗಿದ್ದದ್ದನ್ನು ಸ್ಮರಿಸಿಕೊಂಡ. ಆದರೆ ಈಗ ಹೋಗುವುದರಲ್ಲಿ ಏನರ್ಥವಿದೆ ? ಮೇಲಾಗಿ ಅಪ್ಪನ ಅಪ್ಪಣೆಯಾಗಬೇಕಲ್ಲವೆ ? ಭರತನ ಮಾತೆಯು ಮಗ ಸೊಸೆಯರು ಓಲಾಡಿ ನಲಿದಾಡುವುದನ್ನು ನೋಡಿ ಆನಂದಿಸಬೇಡವೆ ? ಕೌಸಲ್ಯೆ, ಸುಮಿತ್ರೆಯರಿಗೆ ಅಂಥ ಅವಕಾಶವಿರುವಾಗ ಕೈಕೇಯಿ ಹೇಗೆ ಸಹಿಸಿಕೊಂಡಾಳು ? ಶ್ರೀರಾಮ ಲಕ್ಷ್ಮಣರನ್ನು ನಿಜ ಮಾತೆಯಂತೆಯೇ ಪ್ರೀತಿಸುತ್ತಿರುವುದರಿಂದ ಅವರ ಸಂಸಾರದ ಸೊಗಸಿನಲ್ಲಿ ಆನಂದಿಸುವಳೇನೊ ? ಅಂಥ ಆನಂದವನ್ನು ತನ್ನ ತೌರಿನವರೂ ಅನುಭವಿಸಲೆಂದು ಸ್ವಾರ್ಥವನ್ನು ತ್ಯಾಗ ಮಾಡುವಳೊ ಏನೊ ಎಂದು ಗುಣುಗಿಸುತ್ತಿದ್ದನು.

### ಸಂಸಾರದ ಸುಳಿ

ಮಹಾರಾಜನ ಸಮ್ಮತಿ ಸಿಕ್ಕಿತು. ಯುಧಾಜಿತ್ ಮುದದಲ್ಲಿ ಮುಳುಗಿದ. ಭರತ ಮಾಂಡವಿಯರು ಸಿದ್ಧರಾದರು. ಶ್ರುತಕೀರ್ತಿ ಅಕ್ಕನ ಜತೆಗೂಡಿದಳು. ತಾನೂ ಮಾತಾಪಿತೃಗಳಿಗೆ ವಂದಿಸಿ ಜತೆಗೂಡಿದ ರಾಜಗೃಹದಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳಬೇಕು, ಅಣ್ಣನಲ್ಲಿ ಮನಮೆಚ್ಚುವ ವಿನಯವನ್ನು ಪ್ರಕಟಿಸಬೇಕು ಎಂದು ಸುಮಿತ್ರೆ ಹೇಳಿದ್ದು ಕಿವಿಗಳಲ್ಲಿ ಗುಂಯ್ ಗುಟ್ಟುತ್ತಿತ್ತು. ಪ್ರಯಾಣವು ಆಹ್ಲಾದಕರವಾಗಿಯೇ ಸಮೆಯಿತು, ರಾಜಗೃಹದ ಪೌರರು ಅರಮನೆಯವರು ಭವ್ಯ ಸ್ವಾಗತವನ್ನು ನವದಂಪತಿಗಳಿಗೆ ನೀಡಿದರು.

ಮಿಥಿಲೆಯಲ್ಲಿ ಶ್ರೀರಾಮ ಲಕ್ಷ್ಮಣರು ತಮ್ಮೊಡನೆ ಎಷ್ಟು ಆತ್ಮೀಯ

ವಾಗಿ ಭ್ರಾತೃವಾತ್ಸಲ್ಯದಿಂದ ನಡೆದುಕೊಂಡರು. ಸೀತಾದೇವಿ ಊರ್ಮಿಳೆಯರು ಎಷ್ಟು ಸೌಜನ್ಯದಿಂದ ಪ್ರೀತಿಯಿಂದ ಪರಮ ಸ್ನೇಹಕ್ಕೆ ದಾರಿದೋರಿದರು ಎಂಬುದನ್ನು ಭರತ ಶತ್ರುಘ್ನನ ಸ್ಮರಣೆಗೆ ತಂದ. ಇಲ್ಲಿಯ ವಾತಾವರಣವೇ ಬೇರೆ. ಸ್ವಂತ ಮನೆಯೂ ಅಲ್ಲ; ಸ್ವಂತ ಅತ್ತೆಯ ಮನೆಯೂ ಅಲ್ಲ. ಶ್ರುತಕೀರ್ತಿಯ ಯಜಮಾನರಿಗೆ ಆರ್ಯ ಸಂಸ್ಕೃತಿ, ಇಕ್ಷ್ವಾಕು ವಂಶದ ನಡಾವಳಿಗಳು ಸವಾಲು ಹಾಕಿದುವು. ಭರತಾನುಜನ ಮೌನ ಪ್ರಕೃತಿಗೆ ಸಂಕೋಚವೂ ಸೇರಿಕೊಂಡಿತು. ಅದು ಅನಿವಾರ್ಯದ ಆಘಾತ. ಹೇಗೋ ಕಾಲ ಕಳೆಯಬಹುದು. ಸ್ವಲ್ಪ ದಿನಗಳು ಮಾತ್ರ. ಯುಧಾಜಿತ್ತುವಿನ ಏರ್ಪಾಡು ಮತ್ತು ಆಡುವ ನುಡಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ನಾಲ್ಕಾರು ವರ್ಷಗಳು ಮಧ್ಯೆ ಮಧ್ಯೆ ಅಲ್ಪಕಾಲದ ಬಿಡುವುಕೊಟ್ಟು, ರಾಜಗೃಹದಲ್ಲೆ ಬೀಡಾರ ಹೂಡುವಂತೆ ಹೊಳೆಯುತ್ತದೆಯಲ್ಲ? ಆಗಲಿ ಕಾದು ನೋಡೋಣ ಎಂದುಕೊಂಡನು.

ನಾಲ್ಕಾರು ದಿನಗಳಾದ ಮೇಲೆ ತಂಗಿಯ ಸ್ವಭಾವವನ್ನು ಕಂಡಿದ್ದ ಮಾಂಡವಿ ಭರತನಿಗೆ ಏನೇನೊ ಸಲಹೆಗಳನ್ನಿತ್ತಿದ್ದಳೆಂದು ಶತ್ರುಘ್ನನಿಗೆ ಗೊತ್ತಾಯಿತು. ಅಲ್ಪಕಾಲಕ್ಷಲ್ಲೆ ಅಯೋಧ್ಯೆಯಲ್ಲಿ ತಂದೆಯು ಮಾಡಿದ್ದ ಸವಲತ್ತುಗಳಿಗಿಂತ ಹಿರಿದಾದ ಸೌಲಭ್ಯಗಳು ದೃಷ್ಟಿಗೋಚರವಾದುವು. ಏನೇ ಆದರು ಭರತನಿಗೆ ಇರುವ ಸಲಿಗೆ ಅವನ ತಮ್ಮನಿಗೆ ಹೇಗೆ ಉಂಟಾಗಬಲ್ಲುದು? ಕುಶಧ್ವಜನ ಮಕ್ಕಳಿಗೂ ಸಂಕೋಚವೇ. ಎಡಬಿಡದ ಸಾಂಸ್ಕೃತಿಕ ಕಾರ್ಯಕ್ರಮಗಳು, ಬಿಡುವಿಲ್ಲದ ವಿದ್ವತ್ ಗೋಷ್ಠಿಗಳು, ಆಟಪಾಟಗಳ ಕೂಟ, ಸ್ಪರ್ಧಾಕ್ರೀಡೆಗಳ ಮಿಂಚಾಟ, ಶಸ್ತ್ರಾಸ್ತ್ರಗಳ ಅಭ್ಯಾಸ, ವನಮೃಗಗಳ ಬೇಟೆ, ಸ್ತ್ರೀಯರಿಗಾಗಿ ಏರ್ಪಟ್ಟ ವಿನೋದಾವಳಿಗಳು — ಇಷ್ಟೆಲ್ಲಾ ಸೌಕರ್ಯಗಳು ಏರ್ಪಟ್ಟಿದ್ದುವು. ಶತ್ರುಘ್ನನು ಭರತನಿಗೆ ವಿನಯದಿಂದಲೇ ಆಜ್ಞಾಧಾರಕನಾಗಿಯೇ ನಡೆದುಕೊಳ್ಳುತ್ತಿದ್ದ. ಆದರೆ ಇಕ್ಷ್ವಾಕು ವಂಶದ ಕೀರ್ತಿಯನ್ನು ಮುಗಿಲು ಮುಟ್ಟಿಸುವುದು ಹೇಗೆಂದು, ಅದಕ್ಕೆ ಕುಂದುಬಾರದ ಹಾಗೆ ಹೇಗೆ ನಡೆದುಕೊಳ್ಳಬೇಕೆಂಬುದೇ ಅವನ ಅನವರತ ಚಿಂತನೆ. ಮೂವರು ಅಣ್ಣಂದಿರ ಪ್ರೀತ್ಯಾದರಗಳಿಂದ ತನ್ನತನವನ್ನೇ ಕಳೆದುಕೊಂಡು ಬರುತ್ತಿದ್ದ. ಶ್ರೀರಾಮ [illegible] ಅಹರ್ನಿಶಿ ಸ್ಮರಿಸಿಕೊಳ್ಳುತ್ತಿದ್ದ.

ಇದ್ದಷ್ಟು ಕಾಲವೂ ಅಯೋಧ್ಯೆಯ ಅಥವಾ ಕೇಕಿಯ ರಾಜ್ಯದ ರಾಜಕೀಯಗಳ ಪ್ರಸ್ತಾಪವೇ ಬರುತ್ತಿರಲಿಲ್ಲ. ಸವತಿ ಮಕ್ಕಳು ದಾಯಾದಿಗಳು ಎಂಬ ಅಣುವೂ ಯಾವಾಗಲೂ ಇಣುಕಾಡಲೇ ಇಲ್ಲ.

ವಿಶೇಷ ದಿನಗಳಲ್ಲಿ ಅಯೋಧ್ಯೆಗೆ ಬಂದಾಗ ನಾಲ್ವರು ಸಹೋದರರ, ನಾಲ್ವರು ಸಹೋದರಿಯರ ಆನಂದಕ್ಕೆ ಪಾರವೇ ಇರುತ್ತಿರಲಿಲ್ಲ. ಸುಮಿತ್ರೆಯ ಬಳಿ ಪೀಠಸ್ಥರಾದರೆಂದರೆ ಧಾರಾಕಾರವಾದ ವಿಚಾರವಿನಿಮಯ. ಎಲ್ಲಾ ಆಟಪಾಟಗಳ ತಿರುಳು ವಂಶಕೀರ್ತಿಯನ್ನು ನಾಲ್ವರೊಂದಾಗಿ ಕಾಪಾಡಿ ಕೊಂಡು ಬರುವುದೇ ಆಗಿತ್ತು. ಅಂಥ ಸಂದರ್ಭಗಳಲ್ಲಿ ಸುಮಿತ್ರೆಯ ವದನ ದಿಂದ ಶ್ರೀರಾಮನ — ಅಲ್ಲಿಯ ತನಕ ನಡೆದ — ಸಾಹಸ ಕ್ರಿಯೆಗಳನ್ನು ಕೇಳಿದ್ದರೂ ಶತ್ರುಘ್ನನಿಗೆ ತೃಪ್ತಿಯಾಗದೆ, ಅಣ್ಣನ ಬಾಯಿಯಿಂದಲೇ ಕೇಳ ಬೇಕೆಂಬ ಅವನ ಮೌನದ ಆಕಾಂಕ್ಷೆ ನೆರವೇರಿತು.

"ವತ್ಸ, ಶತ್ರುಘ್ನನ ಸಾಹಸ ಕ್ರಿಯೆಗಳನ್ನು ಈ ಮೊದಲೇ ಸುಮಿತ್ರಾ ತಾಯಿಯವರಿಂದ ಕೇಳಿದ್ದೀಯೆ. ನಮ್ಮಗಳ ವಿವಾಹಾನಂತರದ ನಾಲ್ಕೈದು ವರ್ಷಗಳನ್ನು ರಾಜಗೃಹದಲ್ಲಿ ಕಳೆದಿದ್ದೀಯೆ. ಈ ಮೊದಲೇ ನಿನಗೆ ತಿಳಿದಿರುವಂತೆ ನಮ್ಮ ವಂಶದ ಮೂಲ ಪುರುಷ ಇಕ್ಷ್ವಾಕು. ಅವನು ಪ್ರಜಾಪತಿಗಳಲ್ಲೊಬ್ಬನಾದ ಮನುವಿನ ಮಗ. ಸಂಪತ್ಸಮೃದ್ಧವಾದ ಈ ಭೂಮಂಡಲವನ್ನು ಪಾಲಿಸಬೇಕೆಂದು ವಹಿಸಿಕೊಟ್ಟನು. ಈ ವಂಶದ ಪ್ರಸಿದ್ಧರಾದವರಲ್ಲೊಬ್ಬನು ತ್ರಿಶಂಕು, ಅವನು ಸತ್ಯವಂತ. ಅದರ ಮಹಿಮೆ ಯಿಂದ ಸಶರೀರನಾಗಿ ಸ್ವರ್ಗವನ್ನು ಸೇರಿದನು. ಮತ್ತೊಬ್ಬನು ಭರತ ಚಕ್ರವರ್ತಿ. ಇವನಿಂದಲೇ ನಮ್ಮ ದೇಶಕ್ಕೆ ಭರತಖಂಡವೆಂಬ ಹೆಸರು ಬಂದಿತು. ಆಮೇಲೆ ಸಗರನೆಂಬವನು ಜನ್ಮತಾಳಿ ಅನೇಕ ಮಕ್ಕಳನ್ನು ಪಡೆದ. ಭೂಮಿ ಯನ್ನು ತೋಡಿಸಿ ಸಾಗರಗಳನ್ನು ನಿರ್ಮಿಸಿದ ಈ ಸಮಯದಲ್ಲಿ ಇವನ ಅರುವತ್ತುಸಾವಿರ ಮಕ್ಕಳು ಹನನವಾದರು. ಇವರ ಸಂಸ್ಕಾರಕ್ಕೆ ದಿಲೀಪನ ಮಗ ಭಗೀರಥನು ಘೋರವಾದ ತಪಸ್ಸುಮಾಡಿ ಶಿವನನ್ನು ಒಲಿಸಿ ಸ್ವರ್ಗ ದಿಂದ ಗಂಗೆಯು ಮರ್ತ್ಯಕ್ಕಿಳಿದು ಬರುವಂತೆ ಮಾಡಿ ಸಂಸ್ಕಾರ ಮಾಡಿದನು. ಆಧ್ಯಾತ್ಮ ವಿಚಾರದಲ್ಲಿ ಬ್ರಹ್ಮನೊಂದಿಗೇ ಸಂಭಾಷಣೆಯನ್ನು ನಡೆಸಿದ

ಮಹಾನುಭಾವನಿವನು. ಗಂಗೆಯಿಂದ ಎಂಥ ಲೋಕ ಕಲ್ಯಾಣ ಕ್ರಿಯೆಯನ್ನು ಮಾಡಿದ! ಇದನ್ನು ಚನ್ನಾಗಿ ಗಮನದಲ್ಲಿಡು. ವತ್ಸ, ನಮ್ಮ ವಂಶಕ್ಕೆ ಮತ್ತೊಂದು ಹೆಸರೂ ಇರುವುದಲ್ಲವೆ, ಕಾಕುತ್ಸ್ಥರೆಂದು. ಕಕುತ್ಸ್ಥ ಭಗೀರಥನ ಮಗ. ದೇವತೆಗಳ ಮೇಲೆ ಅಸುರರು ಯುದ್ಧ ಹೂಡಿದಾಗ ದೇವತೆಗಳು ಇವನ ಸಹಾಯವನ್ನು ಅಪೇಕ್ಷಿಸಿದರು. ಆಗ ಅವನು ಇಂದ್ರ, ವಾಹನ ನಾಗುವುದಾದರೆ ರಾಕ್ಷಸರ ಸಂಹಾರವನ್ನು ಮಾಡುವೆನೆಂದ. ಆಗ ಇಂದ್ರ ವೃಷಭನ ರೂಪುತಾಳಿ ಇವನಿಗೆ ವಾಹನನಾದ. ಆಗ ಕಕುತ್ಸ್ಥನು ಗೂಳಿಯ ಹಿಣಿಲ ಮೇಲೆ ಕುಳಿತು ದಾನವರನ್ನು ಸಂಹಾರಮಾಡಿದ. ಇದನ್ನೂ ಈ ರಾಕ್ಷಸ ವಧೆಯನ್ನೂ ಜ್ಞಾಪಕದಲ್ಲಿಡು. ಆತನ ಪುತ್ರನೇ ರಘು. ಈ ಹೆಸರೂ ನಮ್ಮ ವಂಶಕ್ಕಿದೆಯಲ್ಲವೆ? ಈತನು ಸ್ವಪರಾಕ್ರಮದಿಂದ ಭೂಮಂಡಲವನ್ನೆ ಗೆದ್ದು ವಿಶ್ವಜಿತ್‌ಯೆಂಬ ಯಜ್ಞವನ್ನು ಮಾಡಿ ಎಲ್ಲಾ ದ್ರವ್ಯವನ್ನೂ ಭೂರಿ ದಕ್ಷಿಣೆ ರೂಪದಲ್ಲಿ ಹಂಚಿಬಿಟ್ಟ. ಆತ ಮಣ್ಣಿನ ಪಾತ್ರೆಗಳನ್ನು ಬಳಸು ವಂತಾಯಿತು. ಆಗ ವಿಶ್ವಾಮಿತ್ರನ ಶಿಷ್ಯನೊಬ್ಬ ಹದಿನಾಲ್ಕು ಕೋಟಿ ಸುವರ್ಣ ನಾಣ್ಯಗಳನ್ನು ಯಾಚಿಸಿದ. ಆಗ ಆತನನ್ನು ಒಂದು ರಾತ್ರಿ ತಂಗುವಂತೆಮಾಡಿ ತಾನು ಕುಬೇರನ ಭಂಡಾರಕ್ಕೆ ಮುತ್ತಿಗೆ ಹಾಕಲು ಯತ್ನಿಸಿದ. ಆಗ ಕುಬೇರನತಿ ಸುವರ್ಣ ಗಣೆಗಳನ್ನೇ ಕರುಣಿಸಿದ, ಆ ಋಷಿ ಯನ್ನು ತಣಿಸಿದ. ನಮ್ಮ ರಾಜ್ಯ ಸುವರ್ಣಮಯವಾಗಿರುವುದು ರಘು ಮಹಾರಾಜನಿಂದಲೆ. ಮತ್ತೊಬ್ಬ ಮಹಾತ್ಮ ಅಂಬರೀಷ. ಈತ ವಿಷ್ಣುವಿನ ಚಕ್ರವನ್ನೇ ಪಡೆದು ಮಗಳಾದ ಶ್ರೀಮತಿಯನ್ನು ಅವನಿಗೇ ಮದುವೆ ಮಾಡಿದ. ಅವನ ಮಗನಾದ ಸತ್ಯಸಂಧನೆಂದೆನಿಸಿಕೊಂಡ ನಹುಷ. ಅಜರಾಜನ ಮಗನೇ ನಮ್ಮ ತಂದೆ. ಸ್ವಪರಾಕ್ರಮದಿಂದ ಇಡೀ ಭೂಮಂಡಲವನ್ನೆ ಗೆದ್ದು ಪ್ರಭುತ್ವವನ್ನು ನಡೆಸುತ್ತಿದ್ದಾನೆ" ಎಂದನು. ಏಕಾಗ್ರಚಿತ್ತದಿಂದ ಅಣ್ಣನ ವಚನಗಳನ್ನು ಕೇಳಿ ಕರ್ಣಾಮೃತವನ್ನುಂಡ ಮೂವರೂ ಶ್ರೀರಾಮನ ಪಾದ ಗಳಿಗೆ ಹರ್ಷಾಶ್ರುಗಳಿಂದ ಅಭಿಷೇಕಮಾಡಿ ವಂದಿಸಿದರು.

ಮತ್ತೆ ರಾಜಗೃಹದಿಂದ ಆದರದ ಆಹ್ವಾನ ಬಂದಿತು. ಅರಮನೆಯ ಸದಸ್ಯರುಗಳ ಅದರಲ್ಲೂ ಸೀತಾರಾಮ ಊರ್ಮಿಳೆ ಲಕ್ಷ್ಮಣರ ಸಹವಾಸದಲ್ಲಿ ಸುವರ್ಣ ಕ್ಷಣಗಳ ಭಾರವನ್ನು ಹೊತ್ತು, ಗುರುಹಿರಿಯರ ಆಶೀರ್ವಾದ ಪಡೆದು

ಕೇಕಯ ರಾಜಧಾನಿಯನ್ನು ಮುಟ್ಟಿದರು.

ವಾಚಾಳಿಯಲ್ಲದ ಶತ್ರುಘ್ನನು ಭರತನೊಂದಿಗೆ ಬೇಟೆಯಾಡಲು ಹೋದಾಗ ಭರತನು ಅಯೋಧ್ಯೆಯ ನೆನಪುಗಳನ್ನು ಪ್ರಸ್ತಾಪಿಸಿದ, ಎರಡು ಮೂರು ಸಂವತ್ಸರಗಳ ಹಿಂದೆ ರಾಮನಿಂದ ತಮ್ಮ ವಂಶವೃಕ್ಷದ ಇತಿಹಾಸ ವನ್ನು ಕೇಳಿದ್ದು ಶತ್ರುಘ್ನನ ಗಮನ ಸೆಳೆಯಿತು. "ಅಣ್ಣ ಎಂಥ ಇಕ್ಷ್ವಾಕು ವಂಶ ನಮ್ಮದು ? ಎಂಥೆಂಥ ವೀರರು, ತ್ಯಾಗಿಗಳು, ವಿಶ್ವಜಿತ್ ಯಾಗ ಮಾಡಿದರು, ಭೂಮಂಡಲವನ್ನೇ ಗೆದ್ದವರು, ಸುರರಿಗೆ ನೆರವಾಗಿ ಅಸುರರನ್ನು ಧ್ವಂಸಮಾಡಿದವರು, ಕೋಸಲವನ್ನು ಕುಬೇರನ ಬೀಡನ್ನಾಗಿ ಮಾಡಿದವರು" ಎಂದು ಶತ್ರುಘ್ನನು ಜ್ಞಾಪಿಸಿಕೊಟ್ಟ. "ಈ ರಘುವಂಶದ ಕೀರ್ತಿಯನ್ನು ಕಾಪಾಡಿ ವೃದ್ಧಿಗೊಳಿಸುವುದೇ ನಮ್ಮ ಬಾಳ ಗುರಿಯಲ್ಲವೆ ಅಣ್ಣ" ಎಂದ. ಅಹುದೆಂದ ಅಣ್ಣ. "ಅವರು ಪ್ರಕಟಿಸಿದ ತ್ಯಾಗ, ಪರಾಕ್ರಮಗಳನ್ನು ನಾವು ವ್ಯಕ್ತಗೊಳಿಸುವ ಅವಕಾಶವೇ ಕಲ್ಪಿತವಾಗಲಿಲ್ಲವಲ್ಲ". "ಅಹುದು, ಅದು ಲಭಿಸುವುದು ಶ್ರೀರಾಮನ ಪಟ್ಟಾಭಿಷೇಕವಾದ ಮೇಲೆ" ಎಂದ. "ಎಂಥ ನಿರೀಕ್ಷೆಯ ಇಕ್ಕಟ್ಟು" ಎಂದು ಹೇಳಿ ಬೇಟೆಯಾಡುವ ಮನಸ್ಸಿಲ್ಲದೆ ಅರಮನೆಯನ್ನು ಸೇರಿದ.

ಶ್ರೀರಾಮ ಸೀತೆ ಲಕ್ಷ್ಮಣ ಊರ್ಮಿಳೆಯರು ಮಿಥಿಲೆಗೆ ಬಂದು ಹೋಗಿದ್ದರೆಂದು ಕುಶಧ್ವಜನಿಗೆ ತಿಳಿಯಿತು. ಪತ್ನಿಯ ಪ್ರೇರಣೆಯಂತೆ ರಾಜಗೃಹಕ್ಕೆ ದೂತರನ್ನು ಮರ್ಯಾದೆಗಳ ಸಮೇತ ಕಳಿಸಿಕೊಟ್ಟನು. ಸಂಭ್ರಮದಿಂದ ಅಳಿಯಂದಿರು ಸಪತ್ನೀಕರಾಗಿ ಆಗಮಿಸಿದ್ದನ್ನು ಕಂಡು ಮಾಂಡವಿ ಶ್ರುತಕೀರ್ತಿಯರ ಮಾತೆಯ ಆನಂದಕ್ಕೆ ಪಾರವೇ ಇಲ್ಲ. ಈಸಲದ ಆದರವೇ ವಿಶೇಷವಾಗಿತ್ತು ; ಕಾರಣ ಹತ್ತು ವರ್ಷಗಳಿಂದಲೂ ರಾಜಗೃಹ ದಲ್ಲೇ ವಾಸ. ಮಕ್ಕಳಿಗೆ ಬೇಸರ ಬೆನ್ನು ಹತ್ತಿತ್ತು ಎಂಬುದನ್ನು ತಾಯಿ ಗುರುತಿಸಿದಳು. ಈ ಸರ್ತಿ ಹತ್ತಾರು ದಿನಗಳು ಅಳಿಯಂದಿರು ಅತ್ತೆಯ ಆತಿಥ್ಯಕ್ಕೆ ಉಳಿದುಕೊಳ್ಳುವಂತಾಯಿತು. ಒಂದು ರಾತ್ರಿ ಅಪ್ಪ ಅಮ್ಮರೊಡ ಗೂಡಿ ಮಾಂಡವಿ ಶ್ರುತಕೀರ್ತಿಯರು ಸ್ವಲ್ಪ ಕಾಲಕ್ಷೇಪ ಮಾಡಿದರು. "ದಶರಥ ಮಹಾರಾಜರು ಇನ್ನೂ ರಾಜ್ಯವಾಳಬೇಕೆ ? ಪ್ರಾಯ ಸಮರ್ಥನೂ

ಪ್ರಾಜ್ಞನೂ ಆದ ಶ್ರೀರಾಮನಿರುವಾಗ ಅವನಿಗೆ ಪಟ್ಟಾಭಿಷೇಕಮಾಡಿ ವಾನಪ್ರಸ್ಥಾಶ್ರಮಕ್ಕೆ ಹೋಗದೆ ಇದ್ದಾರೊ '' ಎಂದ ಕುಶಧ್ವಜ. '' ಅದು ಸರಿ, ಇಷ್ಟು ದೀರ್ಘಕಾಲ ಅಜ್ಜನ ಮನೆಯಲ್ಲಿ ಭರತನಿರಬೇಕಾದ ಆವಶ್ಯಕತೆ ಏನು ? ಶತ್ರುಘ್ನನು ಎಷ್ಟು ಸಂಕೋಚದಿಂದ ಕಾಲ ನೂಕುತ್ತಿರಬಹುದು ? ಅಯೋಧ್ಯೆಯಲ್ಲಿರುವ ಸ್ವಾತಂತ್ರ್ಯ ಅಲ್ಲಿರಬಲ್ಲುದೆ ? ನನ್ನ ಮಕ್ಕಳಿಗೆಂಥ ಮಾನಸಿಕ ನೋವು ? ಅದು ಸಾಧ್ಯವಿಲ್ಲದಿದ್ದರೆ ನಮ್ಮ ಮನೆಗೇ ಏಕೆ ಕಳಿಸಬಾರದಿತ್ತು ಬೀಗತಿಯರು ? ಏನು ರಾಜ ರಹಸ್ಯವೋ ಗೊತ್ತಾಗಲೊಲ್ಲದು '' ಎಂದಳು ಶ್ರುತಕೀರ್ತಿಯ ತಾಯಿ. '' ಕಾದು ನೋಡಬೇಕೆಂದ ''. ಕಾಲಕ್ರಮದಲ್ಲಿ ಈ ವಿಷಯ ಭರತ ಶತ್ರುಘ್ನರ ಕಿವಿಯನ್ನೂ ಹೊಕ್ಕಿತು. ರಾಜಗೃಹಕ್ಕೆ ಮತ್ತೆ ಪ್ರಯಾಣ. ಸೋದರಳಿಯಂದಿರೂ ಅವರ ಪತ್ನಿಯರೂ ಆನಂದವದನರಾಗಿರುವುದನ್ನು ಯುಧಾಜಿತ್ತು ಗಮನಿಸಿದ. ಅಯೋಧ್ಯೆಗೆ ಹೋಗಬೇಕೆಂಬ ಅಭಿಲಾಷೆಯನ್ನು ಬಹು ಸೂಕ್ಷ್ಮವಾಗಿ ಭರತ ವ್ಯಕ್ತಪಡಿಸಿದ. ಶತ್ರುಘ್ನನು ಶ್ರೀರಾಮನ ದರ್ಶನ ಪಡೆಯಬೇಕೆಂಬ ಆಕಾಂಕ್ಷೆಯು ಭರತನನ್ನು ಪ್ರೇರೇಪಿಸಿತು. ಹನ್ನೊಂದು ವರ್ಷದ ರಾಜಗೃಹವಾಸ ಮುಗಿಯಿತು. ದಶರಥನಿಂದಲೂ ಕರೆ ಬಂದಿತ್ತು. ಸಂಭ್ರಮದಿಂದ ಪ್ರಯಾಣ ಬೆಳೆಸಿ ಅಯೋಧ್ಯೆಯನ್ನು ಕಾಲಕ್ರಮದಲ್ಲಿ ಸೇರಿದರು. ಸೀತಾರಾಮರ ಊರ್ಮಿಳಾ ಲಕ್ಷ್ಮಣರ ಉತ್ಸಾಹಕ್ಕೆ ಪಾರವೇ ಇಲ್ಲ. ಇನ್ನು ಸುಮಿತ್ರೆ ಕೈಕೇಯಿಯರದನ್ನು ಹೇಳಬೇಕೆ ?

ಪಿತನ ಬಳಿ ಸಾರಿ ತಮ್ಮ ನಾಮೋಚ್ಚಾರಮಾಡಿ ಪರಿಚಯ ಮಾಡಿಕೊಂಡರು. ನಡುಗುವ ಕರಗಳಿಂದ ಆಲಿಂಗಿಸಿ ಶಿರಾಘ್ರಾಣವನ್ನು ಮಾಡಿದನು. ಕುಶಲಪ್ರಶ್ನೆಗಳನ್ನು ಹಾಕಿ ಪ್ರತ್ಯುತ್ತರವನ್ನು ಪಡೆದು ಸಂತುಷ್ಟನಾದ. ಶತ್ರುಘ್ನನಿಗೆ ತಂದೆಯು ಕಡುಚಿಂತೆಯಲ್ಲಿ ಮುಳುಗಿ ಕಂಗೆಟ್ಟವನಂತೆ ಕಾಣಿಸಿಕೊಂಡ, ಅಷ್ಟರಲ್ಲೇ ಕೈಕಾದೇವಿಯು ಹರ್ಷಭರಿತಳಾಗಿ ಅಡಿಗೆ ಮುಡಿಯನ್ನಿಟ್ಟಿದ್ದ ಶತ್ರುಘ್ನನನ್ನು ಎತ್ತಿ ಪ್ರೀತಿಯ ಮುದ್ರೆಗಳನ್ನೊತ್ತಿದಳು. ತೌರಿನ ವಿಚಾರವನ್ನು ತಿಳಿದುಕೊಂಡಳು. '' ಮಗು, ಭರತನಿಗೆ ನನ್ನ ತಂದೆ ಸಹೋದರರು ವ್ಯಕ್ತಪಡಿಸಿದ ಆದರಾತಿಥ್ಯಗಳು ಸ್ವಾಭಾವಿಕವಾದುವು. ಆದರೆ ನಿನ್ನನ್ನು ಹೇಗೆ ಕಂಡುಕೊಂಡರು ?'' ಎಂದಳು. '' ಅಮ್ಮ, ಮಾವ, ತಾತ

ಮತ್ತು ಪುರವಾಸಿಗಳು ಭರತಣ್ಣನನ್ನು ರಾಜನಂತೆಯೂ ನನ್ನನ್ನು ಯುವ ರಾಜನಂತೆಯೂ ಔಚಿತ್ಯಪೂರ್ಣವಾಗಿ ನೋಡಿಕೊಂಡರು". "ಎಂಥ ಮುದ್ದು ಕಂದ, ಎಷ್ಟು ಮುದ್ದಾಗಿ ಮಾತನಾಡಿದೆಯೊ" ಎಂದು ಹೇಳಿ, ವಂದಿಸಿದ ಸೊಸೆಯರಿಗೂ ಆಶೀರ್ವದಿಸಿ ಬೀಳ್ಕೊಟ್ಟಳು. ನಾಲ್ವರೂ ಮಹಾ ಮಾತೆಯಾದ ಕೌಸಲ್ಯೆಯ ಗೃಹವನ್ನು ಹೊಕ್ಕರು. ಆಗತಾನೇ ಎಷ್ಟು ಸಹಸ್ರ ನಾಮ ಜಪಿಸಿ ಮುಗಿಸಿ ತೀರ್ಥ ಪ್ರಸಾದವನ್ನು ಸ್ವೀಕರಿಸುತ್ತಿದ್ದಳು ಕೌಸಲ್ಯಾ ದೇವಿ. ಅವಳೂ ಚಿಂತಾಕ್ರಾಂತಳಾಗಿ ವ್ರತಾಚರಣೆಗಳಿಂದ ಕೃಶಳಾಗಿದ್ದದ್ದನ್ನು ಗಮನಿಸಿದರು. ಮಹಾರಾಣಿಯು ಮಾತಾಮಮತೆಯನ್ನು ವ್ಯಕ್ತಪಡಿಸಿ ತೀರ್ಥಪ್ರಸಾದಗಳನ್ನಿತ್ತಳು. ರಾಜಗೃಹದ ಕುಶಲವನ್ನು ವಿಚಾರಿಸಿದಳು. ಇಲ್ಲಿ ಏನು ಸುಖ ಸೌಕರ್ಯಗಳನ್ನು ಪಡೆಯುತ್ತಿದ್ದೆವೊ ಅದಕ್ಕೂ ಮಿಗಿಲಾಗಿ ಪಡೆದೆವೆಂದ ಶ್ರುತಕೀರ್ತಿಯ ರಮಣ. ಕೈಕಾದೇವಿಯ ಬಳಿ ಹೇಳಿದಂತೆ ಇಲ್ಲಿಯೂ ಹೇಳಿದ್ದನ್ನು ಕೌಸಲ್ಯೆ ಕೇಳಿ ಸ್ವಲ್ಪ ಚಕಿತಳಾದಳು. ಇಲ್ಲೇ ಇದ್ದು ಬಿಡಿ ಇನ್ನು ಎಂದಳು. ಪಿತೃವಾಕ್ಯವನ್ನು ಪರಿಪಾಲಿಸುವೆನೆಂದ. ತುಂಬು ಹೃದಯದ ಆಶೀರ್ವಾದಗಳನ್ನು ಹೊತ್ತು ಸುಮಿತ್ರೆಯ ಅರಮನೆಯನ್ನು ಸೇರಿದರು. ರಾಜಗೃಹದ ಮತ್ತು ಮಕ್ಕಳು ಸೊಸೆಯಂದಿರ ವಿಚಾರಗಳನ್ನು ತಿಳಿದುಕೊಂಡು ಆನಂದಾತಿಶಯದಿಂದ ಅವರುಗಳು ಸ್ವಗೃಹಗಳಲ್ಲಿ ವಿಶ್ರಮಿಸುವಂತೆ ಆಶೀರ್ವದಿಸಿ ಕಳಿಸಿದಳು. ಶತ್ರುಘ್ನಾದಿಗಳ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಶ್ರೀರಾಮ ಲಕ್ಷ್ಮಣ ದಂಪತಿಗಳಿಗೆ, ವಿನಯ ಪೂರ್ವಕವಾಗಿ ವಂದಿಸಿ ಹರ್ಷೋನ್ಮತ್ತರಾಗಿ ತಮ್ಮ ಬಿಡಾರಗಳಿಗೆ ತೆರಳಿದರು.

ನಾಲ್ಕಾರು ದಿನಗಳಾದ ನಂತರ ಇಂಗಿತಜ್ಞನಾದ ಶ್ರೀರಾಮನು ಶತ್ರುಘ್ನನನ್ನು ಬರಮಾಡಿಕೊಂಡನು. ನಾಲ್ವರೂ ಕೂಡಿದರು. "ವತ್ಸ, ಶತ್ರುಘ್ನ, ನಿನ್ನ ಅಂತರ್ಯವನ್ನರಿತೆ; ನಮ್ಮ ವಂಶೀಯರ ಕತೆಯನ್ನು ಇಂದು ಪೂರೈಸುವೆನು. ಇಕ್ಷ್ವಾಕು ವಂಶದಲ್ಲಿ ಎಲ್ಲರೂ ಮಹಾಪುರುಷರಾಗಿರಲಿಲ್ಲ. ಅವರುಗಳ ಪತ್ನಿಯರೆಲ್ಲರೂ ಕುಲೀನೆಯರಾಗಿರಲಿಲ್ಲ. ಈ ವಂಶಕ್ಕೊಂದು ಜಾಡ್ಯವಿದೆ; ಬಹು ಪತ್ನೀತ್ವ. ಅಸಿತನೆಂಬ ರಾಜನು ಶತ್ರುಗಳಿಂದ ಸೋತು ಸಂನ್ಯಾಸಿಯಾದನು. ಅವನಿಗೆ ಇಬ್ಬರು ಹೆಂಡಿರು. ಗರ್ಭವತಿಯಾದ ಕಾಳಿಂದಿ ಎಂಬುವಳಿಗೆ ಸವತಿಯು ವಿಷ ಹಾಕಿದಳು. ಚ್ಯವನ ಋಷಿಯ ಆಶೀರ್ವಾದ

ದಿಂದ ವಿಷದೊಂದಿಗೆ ಪುತ್ರ ಜನಿಸಿದನು. ಅವನೇ ಸಗರ ಮಹಾರಾಜ. ಈ ಸಗರನಿಗೆ ಅಸಮಂಜನೆಂಬೊಬ್ಬ ಮಗನಿದ್ದನು. ಅವನು ನಗರದ ಮಕ್ಕಳನ್ನು ಸರಯೂ ನದಿಗೆ ತಳ್ಳಿ ಆಟವಾಡಿ ಹರ್ಷಿಸುತ್ತಿದ್ದನು. ಪ್ರಜೆಗಳ ದೂರನ್ನು ಕೇಳಿ ಸಗರ ಅವನನ್ನು ದೇಶಭ್ರಷ್ಟನನ್ನಾಗಿ ಮಾಡಿದ. ರಘು ಮಹಾರಾಜನ ಮಗನಾದ ಕಲ್ಮಾಷಪಾದನಿಗೆ ಶಂಖಣನೆಂಬೊಬ್ಬ ಪುತ್ರ ನಿದ್ದನು. ಅವನು ತಂದೆಯ ಮೇಲೆ ಯುದ್ಧಕ್ಕೆ ನಿಂತು ಹತನಾದನು. ನಮ್ಮ ವಂಶದ ಕೀರ್ತಿಯನ್ನು ಕಾಪಾಡಿಕೊಳ್ಳಬೇಕಾದರೆ ಇವರಿಂದಲೂ ನಾವು ಪಾಠವನ್ನು ಕಲಿಯಬೇಕಾದ ಆವಶ್ಯಕತೆ ಇದೆ.

"ನಮ್ಮ ವಂಶೀಯರು ಭೂಮಂಡಲದೊಡೆಯರಾಗಿದ್ದರೆಂದು ಹೇಳಿದೆ ನಷ್ಟೆ. ನಮ್ಮ ತಂದೆಯೂ ಹಲವು ಕಾಲ ಅದನ್ನೇ ಕಾಪಾಡಿಕೊಂಡು ಬಂದ. ಆದರೆ ಮಕ್ಕಳಾಗಲಿಲ್ಲವೆಂಬ ಚಿಂತೆ ಆವರಿಸಿತು ; ಆಡಳಿತ ಸಡಿಲವಾಯಿತು. ಫಲಿತಾಂಶ ಸಾಮಂತ ರಾಜರಲ್ಲಿ ಕೆಲವರು ಸ್ವತಂತ್ರರಾಗಿಬಿಟ್ಟರು. ಇಕ್ಷ್ವಾಕು ಮಹಾರಾಜನ ನೂರುಮಂದಿ ಮಕ್ಕಳಲ್ಲೊಬ್ಬ ದಂಡಕನೆಂಬುವನು. ಅವನು ಮಹಾ ಮೂರ್ಖನಾಗಿದ್ದದ್ದರಿಂದ ವಿಂಧ್ಯ, ಶೈವಲವೆಂಬ ಪರ್ವತಗಳ ಮಧ್ಯೆ ಒಂದು ರಾಜ್ಯವನ್ನು ನಿರ್ಮಿಸಿ ಅಲ್ಲಿಗಧಿಪತಿಯನ್ನಾಗಿ ಮಾಡಿದ. ಒಂದು ದಿವಸ ಅವನು ಶುಕ್ರಾಚಾರ್ಯರ ಆಶ್ರಮಕ್ಕೆ ಹೋದ. ಅವರಿರಲಿಲ್ಲ, ಅವರ ಸ್ಫುರ ದ್ರೂಪಿಯಾದ ಮಗಳು, ಅರಜೆ, ಆತಿಥ್ಯವನ್ನು ನೀಡಿದಳು. ದಂಡಕ ಕಾಮಾಂಧನಾಗಿ ವರ್ತಿಸಿದ. ಶುಕ್ರಾಚಾರ್ಯರು ಬಂದು ತಿಳಿದು ದಂಡಕ ಮತ್ತು ಅವನ ರಾಜ್ಯ ಏಳುದಿನಗಳೊಳಗಾಗಿ ನಾಶವಾಗಲೆಂದು ಶಪಿಸಿದ. ಆಮೇಲೆ ಆ ಪ್ರದೇಶಕ್ಕೆ ಜನಸ್ಥಾನವೆಂದೂ, ದಂಡಕಾರಣ್ಯವೆಂದೂ ಹೆಸರಾ ಯಿತು. ಅದು ಈಗ ರಾಕ್ಷಸರ ವಶವಾಗಿದೆ. "ಪೂರ್ವದೇಶಗಳು, ಸಿಂಧು, ಸೌವೀರ, ಸೌರಾಷ್ಟ್ರ, ದಕ್ಷಿಣಾಪಥ, ಗಾಂಧಾರ ದೇಶಗಳು ಸ್ವತಂತ್ರವಾಗಿ ಬಿಟ್ಟಿವೆ. ಧರ್ಮಪಾಲನೆ ಆಗದೆ ಲೋಕ ಬಳಲುತ್ತಿದೆ. ಅವುಗಳನ್ನೆಲ್ಲಾ ಸ್ವಾಧೀನಪಡಿಸಿಕೊಂಡು ಮಹಾರಾಜನಿಗೆ ಸಂತೋಷವನ್ನುಂಟುಮಾಡಬೇ ಕಾದ್ದು ನಮ್ಮ ಧ್ಯೇಯ. ಇದಕ್ಕೆ ನಾವುಗಳೆಲ್ಲರೂ ಏಕೀಭವಿಸಿ ನಡೆಯುವುದಕ್ಕೆ ರಾಜಾಜ್ಞೆಯನ್ನು ನಿರೀಕ್ಷಿಸುತ್ತಿರೋಣ" ಎಂದ ಶ್ರೀರಾಮ. ಶತ್ರುಘ್ನಾದಿಗ ಳಿಗೆ ಜೀವನದ ಧ್ಯೇಯದರ್ಶನವು [illegible] ನಿರೀಕ್ಷಣಾ ತಪಸ್ಸಿನಲ್ಲಿ

ನಿರತರಾದರು.

ರಾಜಸೇವೆಯನ್ನು ಮುಗಿಸಿಕೊಂಡು ಸುಮಂತ್ರನು ಮನೆಗೆ ಬರುತ್ತಿದ್ದಾಗ ದಾರಿ ಕಾಯುತ್ತಿದ್ದ ಶತ್ರುಘ್ನನನ್ನು ನೋಡಿ ಆಲಿಂಗಿಸಿ ಉದ್ಯಾನವನದತ್ತ ಕರೆದುಕೊಂಡು ಹೋದನು. ಶತ್ರುಘ್ನನ ದೀರ್ಘಕಾಲದ ರಾಜಗೃಹವಾಸದ ವಿವರಗಳನ್ನೆಲ್ಲಾ ತಿಳಿದುಕೊಂಡನು. "ನೀನು ನಮ್ಮ ವಂಶದ ತಾತ ಮುತ್ತಾತರ ಕಾಲದಿಂದಲೂ ಮಂತ್ರಿಯಾಗಿದ್ದೀಯೋ. ರಘುವಂಶದ ಕೀರ್ತಿಯ ವ್ಯಾಪ್ತಿಯನ್ನು ಬಲ್ಲೆ. ನನಗೆ ಹೇಳಬೇಕಾದ್ದೇನಾದರೂ ಇದ್ದರೆ ತಿಳಿಸು"ಎಂದ ಶತ್ರುಘ್ನ. ' ಈಗ ನಿನಗೆ ಇಪ್ಪತ್ತೈದು ಇಪ್ಪತ್ತಾರು ವರ್ಷಗಳಾಗಿರುತ್ತವೆ. ಆದರೆ ಹತ್ತುಹನ್ನೊಂದು ಸಂವತ್ಸರಗಳಕಾಲ ರಾಜಗೃಹದಲ್ಲಿದ್ದುದರಿಂದ ನಿಮ್ಮ ಕುಲದ ವಿಷಯಗಳು ಅಷ್ಟಾಗಿ ಗೊತ್ತಿಲ್ಲವೆಂದು ಭಾವಿಸುತ್ತೇನೆ. ಆದರೆ ಒಂದು ಮುಖ್ಯ ವಿಷಯವನ್ನು ಮಾತ್ರ ಹೇಳುತ್ತೇನೆ. ನಿಮ್ಮ ವಂಶದಲ್ಲಿ ಮಹಾ ಪರಾಕ್ರಮಿಯಾದ ಅನರಣ್ಯನೆಂಬ ರಾಜನಿದ್ದನು. ರಾವಣನೆಂಬ ರಾಕ್ಷಸನು ಧರಣಿ ಮಂಡಲವನ್ನೆಲ್ಲಾ ಗೆದ್ದುಕೊಂಡು ಬಂದ. ಈ ಖಂಡದ ರಾಜಮಹಾರಾಜಾಧಿಗಳು ಅವನಿಗೆ ಶರಣಾದರು. ಅನರಣ್ಯನು ಮಾತ್ರ ಹಾಗೆ ಮಾಡದೆ ಎದುರಿಸಿ ಮಡಿದ. ಆಗ ನಿಮ್ಮ ರಾಜ ಆ ದುರುಳನಿಗೆ ಶಾಪವಿತ್ತ. ತನ್ನ ವಂಶೀಕನಿಂದಲೇ ಆತನಿಗೆ ಮರಣವಾಗುತ್ತದೆ ಎಂದು ಹೇಳಿದ್ದನ್ನು ನಾನು ಕೇಳಿದ್ದುಂಟು. ಅಂಥ ಸಮಯ ನಿಮ್ಮ. ಜೀವಿತಕಾಲದಲ್ಲೇ ಬರುತ್ತದೆಯೊ ಇಲ್ಲವೋ ನಾನು ಹೇಳಲಾರೆ, ಹಾಗಾಗಬಹುದೆಂದು ಅಸ್ಪಷ್ಟವಾಗಿ ನನ್ನಮತಿಯಲ್ಲಿ ಇಣುಕಾಡುತ್ತಿದೆ"ಎಂದ. ವೃದ್ಧ ಮಂತ್ರಿಯನ್ನು ವಂದಿಸಿ ಹಿಂದಿರುಗಿದ. ಶ್ರುತಕೀರ್ತಿಯ ಮಂದಹಾಸದಿಂದ ಸ್ವಲ್ಪ ಕಾಲ ಚಿಂತೆಯ ಆಘಾತವನ್ನು ನಿವಾರಿಸಿಕೊಂಡ.

ಸುಮಿತ್ರೆಯ ದರ್ಶನವನ್ನು ಪಡೆದ. "ಏಕಮ್ಮ, ದೊಡ್ಡಮ್ಮನವರು ಸದಾವ್ರತಾಚರಣೆಯಲ್ಲಿ ನಿರತರಾಗಿ ಇಳಿದು ಹೋಗಿದ್ದಾರೆ. ಏಕೆ ಈ ತಪಸ್ಸು?" "ಮುತ್ತೈದೆತನಸಿಗಲೆಂದು." "ನೀನು ಅಂಥವ್ರತಾಚರಣೆಗಳಲ್ಲಿ ತೊಡಗಲಿಲ್ಲವೇಕೆ ?" "ನಾನು ಸಂಪೂರ್ಣವಾಗಿ ಭಗವಂತನಿಗೆ ಶರಣಾಗಿ ಬಿಟ್ಟಿದ್ದೇನೆ. ನಾನು ಮಾಡುವುದು, ಅವನೇ ಮಾಡುವುದು ಎಲ್ಲಾ ಅವನೇ

ನಿಯಂತ್ರಿಸಿದ್ದಾನೆ." "ಹಾಗಾದರೆ ನಿನಗಾವ ಈಪ್ಸೆಯೂ ಇಲ್ಲವೆ?" "ಇದೆಯಪ್ಪ" "ಅದಾವುದು, ಹೇಳಮ್ಮ" "ನಿನ್ನ ಮಕ್ಕಳನ್ನು ನೋಡ ಬೇಕೆಂಬ ಆಶೆಯಿದೆ" "ಅದು ಹೇಗಾದೀತಮ್ಮ. ಶ್ರೀರಾಮಾದಿಗಳಿಗೇ ಇಲ್ಲದ್ದು ನನಗಾದೀತೆ? ನಾನೆಲ್ಲರಗಿಂತ ಕಿರಿಯವನಲ್ಲವೆ?" ಹುಸಿನಗೆ ನಕ್ಕು "ಶರಣಾದವಳು ಆ ಆಶೆಯನ್ನಿಟ್ಟುಕೊಂಡಿರುವುದು ನಿಜ ಶರಣತ್ವಕ್ಕೆ ಕುಂದು" ಎಂದಳು. "ನೀನು ಕೈಕೆಯ ಬಳಿಗೆ ಹೋಗಿದ್ದೆಯಲ್ಲ. ಅವಳಿಗಾವ ಅಭೀಪ್ಸೆ ಯಿರುವುದಂತೆ," "ಶ್ರೀರಾಮನ ಸದಾ ದರ್ಶನವೇ ಅವಳ ಸರ್ವಸ್ವವಂತೆ" "ಅದು ನಿಜವಾಗಲಿ. ಮತ್ತೆ ರಾಜ ಗೃಹದಿಂದ ಆಹ್ವಾನ ಬಂದರೆ ಏನು ಮಾಡುವೆ" "ಪಿತೃವಾಕ್ಯ ಪರಿಪಾಲನೆಯೇ ನಮ್ಮೆಲ್ಲರ ಕರ್ತವ್ಯವಲ್ಲವೇನಮ್ಮ" "ಹೌದು, ಹೌದು" ಎಂದು ಉಪಹಾರ ಪಾನೀಯಗಳನ್ನು ಕೊಟ್ಟಳು.

ಮಕ್ಕಳಿಲ್ಲವೆಂಬುದೊಂದು ಚಿಂತೆ. ಅದು ಪರಿಹರಿಯಿತು. ಮಕ್ಕಳಿಗೆ ಮದುವೆಯಾಗಲಿಲ್ಲವೆಂಬುದೊಂದು ಕೊರಗು. ಅದು ನಿವಾರಣೆಯಾಗಿದೆ. ಮೊಮ್ಮಕ್ಕಳಾಗಲಿಲ್ಲವೆಂಬ ಮನೋವ್ಯಾಧಿ ಈ ವೃದ್ಧ ಮಾತಾಪಿತೃಗಳಿಗೆ ಆವರಿಸಿದಂತಿದೆ. ಆಮೇಲೆ ? ? ? ಅಯ್ಯೋ ಈ ವಿಧದ ಭ್ರಾಂತಿಗೆ ಅಂತ್ಯ ವುಂಟೆ? ಅರಮನೆಯ ವಾತಾವರಣದಲ್ಲಿ ಏನೋ ಒಂದು ಕಪ್ಪು ಛಾಯೆ ಸುಳಿದಾಡುವಂತಿದೆ. ಅನನುಭವಿಗಳಾದ ನಮಗೆ ಹೇಗೆ ಗೊತ್ತಾಗಬೇಕು. ಅರ ಮನೆ ತುಂಬ ಇರುವ ಮಾತೆಯರನ್ನೆಲ್ಲಾ ನೋಡಿದ್ದಾಯಿತು. ವಿನೋದ ಪಡಿಸಿದ್ದಾಯಿತು. ಆದರೂ ಎಲ್ಲರಿಗೂ ಒಂದು ಕೊರತೆ ಇರಲಿ. ಕೈಕಾದೇವಿ ಯರು ಮಹಾ ಚತುರರು. ಉಳಿದೆಲ್ಲಾ ಮಾತೆಯರಿಗೆ ಅವಳ ಬಗೆಗೆ ಕಹಿ ಮನಸ್ಸು. ಏನೋ ಒಂದು ವಿಷಯವನ್ನು ಆವಿಷ್ಕರಣ ಮಾಡಿದವನಂತೆ ಭರತ ಮಾತೆಯ ಅರಮನೆಗೆ ಧಾವಿಸಿದ. ಸುಮಿತ್ರೆಯ ಪುತ್ರ ಭರತಾನುಜ ಬಂದುದನ್ನು ನೋಡಿ ಆದರದಿಂದ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಶಿರಸ್ಸನ್ನು ಆಘ್ರಾಣಿಸಿದಳು. ಪ್ರಶ್ನಿಸಿದಳು. "ಇದು ನಮ್ಮರಮನೆಯೆಂಬ ಅಭಿಮಾನದಿಂದ ಕೇಳಿಕೊಳ್ಳುತ್ತಿದ್ದೇನೆ. ಎಲ್ಲರಿಗೂ ಬೇಸರವಾದಂತೆ ಕಾಣಿ ಸುತ್ತದೆ. ಅಪ್ಪನಿಗೆ ಹೇಳಿ ಒಂದು ರಾಜಾಜ್ಞೆಯನ್ನು ಹೊರಡಿಸುವಂತೆ ಮಾಡಿರಿ" ಎಂದ. "ಆಗಲಿ, ಖಂಡಿತ ಮಾಡುತ್ತೇನೆ" ಎಂದಳು. ಅರಮನೆಯಲ್ಲಿ ಹಾಸ್ಯಭರಿತವಾದ ಮತ್ತು ಖಳನಾಯಕನು ಅಂತ್ಯದಲ್ಲಿ ಹತನಾಗಿ ನಾಯಕನಿಗೆ

ಪಟ್ಟಾಭಿಷೇಕವಾಗುವಂತಹ ನಾಟಕದ ಅಭಿನಯುವಾಗಲಿ" ಎಂದ. "ಇದಾವ ಮಹಾ ವಿಷಯು ಮಗು, ನಾಳೆಯೇ ಏರ್ಪಡಿಸುತ್ತೇನೆ" ಎಂದಳು. "ಅಷ್ಟೇ ಅಲ್ಲವಮ್ಮ ನೀನು ಮತ್ತು ಎಲ್ಲಾ ರಾಜಸ್ತ್ರೀಯರೂ–ಈ ನಿನ್ನ ಮಂಥರೆಯೂ–ನಾಟಕವನ್ನು ನೋಡಿ ಆನಂದಿಸಬೇಕು" ಎಂದ. "ಆ ಭವಿಷ್ಯವನ್ನು ನಾನು ಹೇಳಲಾರೆ. ಆದರೆ ನಾನು ಮಾತ್ರ ನಾಟಕ ಮಂದಿರದಲ್ಲಿ ಪೀಠಸ್ಥಳಾಗಿರುತ್ತೇನೆ" ಎಂದಳು. "ನೀನು ವಿನಂತಿಸಿಕೊಂಡಿರುವೆ ಎಂದು ಎಲ್ಲಾ ಮಾತೆಯರಿಗೂ ಆಹ್ವಾನ ಕೊಡುತ್ತೇನಮ್ಮ." "ಅದು ನಿನಗೆ ಸೇರಿದ್ದು" "ಆಗಲಿ ಅಪ್ಪಾ" ಎಂದು ವಂದಿಸಿ ಹೊರಬಿದ್ದ. ಎಂಥ ಮುದ್ದು ಮಗ, ಎಷ್ಟು ಬುದ್ಧಿವಂತ, ಎಂಥ ಕಾರ್ಯಶೀಲ ಎಂದಳು ಮಂಥರೆ. ಮಾರನೆ ರಾತ್ರಿ ನಾಟಕವನ್ನು ಎಲ್ಲಾ ಅರಮನೆ-ಸ್ತ್ರೀಯರು ಒಟ್ಟಾಗಿ ವೀಕ್ಷಿಸಿ ಹೊಟ್ಟೆ ಹುಣ್ಣಾಗುವಷ್ಟು ನಕ್ಕು ನಲಿದರು. ಪಟ್ಟಾಭಿಷೇಕವು ಎಲ್ಲರ ಹೃನ್ಮನಗಳನ್ನು ಹಿಂಡಿತು. ಶತ್ರುಘ್ನನೊಬ್ಬ ಕರ್ಮಯೋಗಿ ಎಂದು ಎಲ್ಲರೂ ಕೊಂಡಾಡಿದರು.

ರಾಜಗೃಹದಿಂದ ಮತ್ತೆ ತುರ್ತು ಕರೆ ಬಂತು. ಯುಧಾಜಿತ್ ಮಹಾರಾಜನೇ ಬಂದು ಬಿಟ್ಟಿದ್ದಾನೆ. ಶ್ರೀರಾಮನಿಗೆ ಚಿಂತೆ ಆವರಿಸಿತು. ಭರತ ಶತ್ರುಘ್ನರಿಗೆ ರಾಜ್ಯಾಡಳಿತದ ವಿಷಯು ಚನ್ನಾಗಿ ಗೊತ್ತಿಲ್ಲ. ಇಕ್ಷ್ವಾಕು ವಂಶದ ಕೀರ್ತಿಯ ವೃದ್ಧಿಗೆ ನಾವೆಲ್ಲರೂ ಬಹಳವಾಗಿ ಶ್ರಮಿಸಬೇಕಾಗಿದೆ. ಇವರನ್ನು ಮತ್ತೆ ರಾಜಗೃಹಕ್ಕೆ ಕಳಿಸುವುದು ಸೂಕ್ತವಲ್ಲ. ಏನು ಮಾಡಬೇಕೆಂದು ಆಲೋಚನಾಪರನಾಗಿದ್ದ. ಶ್ರೀರಾಮನು ಏಕಾಂತದಲ್ಲಿರುವುನ್ನರಿತು ತಾ ಬಂದಿರುವುದನ್ನು ಅಣ್ಣನಿಗೆ ತಿಳಿಸೆಂದು ದ್ವಾರಪಾಲಕನಿಗೆ ಹೇಳಿದ. ಕರೆ ಬಂದು ಒಳಗೆ ಹೋಗಿ ಅಣ್ಣನ ಅಡಿಗಳಿಗೆರಗಿ ಪೀಠಸ್ಥನಾದ. "ಅಣ್ಣ, ಅಂಜಿಕೆಯಿಂದ ನಮ್ರವಾಗಿ ವಿನಂತಿಸಿಕೊಳ್ಳುತ್ತಿದ್ದೇನೆ. ವಿಶ್ವಾಮಿತ್ರರ ಶಿಷ್ಯವೃತ್ತಿಯಲ್ಲಿದ್ದಾಗ ಸಾಕ್ಷಾತ್ ದೇವೇಂದ್ರನೆ ಪ್ರತ್ಯಕ್ಷನಾಗಿ ಸಕಲಶಸ್ತ್ರಾಸ್ತ್ರವಿದ್ಯೆಗಳನ್ನು ನಿನಗೆ ಕಲಿಸೆಂದು ವಿಶ್ವಾಮಿತ್ರರಿಗೆ ಆದೇಶವನ್ನಿತ್ತರಂತೆ; ಕಾರಣ ನೀನು ಭವಿಷ್ಯದಲ್ಲಿ ಮಹತ್ತಾದ ದೇವಕಾರ್ಯವನ್ನು ಮಾಡಬೇಕಾಗುತ್ತದೆ ಎಂದು. ಇದು ನಮ್ಮ ವಂಶೀಕರಿಗೂ ದೇವರಾಜನಿಗೂ ಆದಿಯಿಂದಲೂ ಬೆಳೆದುಬಂದ ನಂಟು. ಸುರಕಾರ್ಯದಲ್ಲಿ ನಾವೂ ಭಾಗಿಗಳಾಗಬೇಕೆಂಬ ಹಂಬಲವಿದೆ. ವಿಶ್ವಾಮಿತ್ರರು ನಮಗೆ ಶಿಷ್ಯತ್ವವನ್ನು ಕರುಣಿಸದೆ ಹೋದರು. ಚಿಂತೆಯಿಲ್ಲ ನಿನ್ನ ಸಹವಾಸ

ದಲ್ಲಿ ಸದಾ ಇರುವುದನ್ನು ಕರುಣಿಸು. ಹಾಗೆಮಾಡುವುದು ಕೈಕಾದೇವಿಯಿಂದ ಸಾಧ್ಯವಾಗುತ್ತದೆ. ನಾನೇ ಅವರಲ್ಲಿ ವಿನಂತಿಸಿಕೊಳ್ಳಬೇಕೆಂದಿದ್ದೆ. ರಾಜಗೃಹ ವಾಸ ಸಾಕೆಂದು ಹೇಳಿದರೆ ಅವರು ತೌರಿನಲ್ಲಿ ನಮಗೆ ತೃಪ್ತಿಕರವಾದ ಸತ್ಕಾರ ವಾಗಲಿಲ್ಲವೆಂದು ಶಂಕಿಸಬಹುದು. ಆದ್ದರಿಂದ ದೇವಿಯಲ್ಲಿ ಯಾವ ರೀತಿಯಲ್ಲಿ ಮಂಡಿಸಬೇಕೆಂಬುದು ನಿನಗೇ ಗೊತ್ತಿದೆ. ಈ ಸಲ ಸಾಧ್ಯವಿಲ್ಲದಿದ್ದರೂ ಇಲ್ಲಿಗೆ ಬಂದಮೇಲೆ ಪುನಃ ರಾಜಗೃಹಕ್ಕೆ ಹೋಗದ ಹಾಗೆ ಮಾಡಬೇಕೆಂದು ವಿನಂತಿಸಿ ಕೊಳ್ಳುತ್ತೇನೆ. ನಿನ್ನ ಕಾರ್ಯನಿರ್ವಹಣೆಯಲ್ಲಿ ನಾವಿಬ್ಬರೂ ಪೂರ್ಣವಾಗಿ ಭಾಗಿಗಳಾಗಬೇಕೆಂದು ನನ್ನ ಮನಸ್ಸು ಈ ಕೆಲವು ಮಾಸಗಳಿಂದ ಒತ್ತಾಯಿಸು ತ್ತಿದೆ"ಎಂದ. "ವತ್ಸ, ನಾನೂ ಅದನ್ನೇ ಯೋಚಿಸುತ್ತಿದ್ದೆ. ದೇವಕಾರ್ಯವು ಯಾವಾಗ ಸನ್ನಿಹಿತವಾಗುವುದೊ ಗೊತ್ತಿಲ್ಲ. ಆದರೆ ನಾವು ಸದಾ ಸಿದ್ಧರಾಗಿರ ಬೇಕು. ನೀವು ವಿಶೇಷವಾಗಿ ರಾಜಗೃಹದಲ್ಲಿ ಶಸ್ತ್ರಾಸ್ತ್ರಾಭ್ಯಾಸವನ್ನು ಎಡೆಬಿಡದೆ ನಡೆಸಿರಿ."ಎಂದು ಹೇಳಿ ಶ್ರೀರಾಮನು ಶತ್ರುಘ್ನನನ್ನು ಬೀಳ್ಕೊಟ್ಟನು.

ನಾಟಕವನ್ನು ನೋಡಿ ರಾಮನಾದಿಯಾಗಿ ಅರಮನೆಯವರೆಲ್ಲಾ ವ್ಯಕ್ತಿ ಗತವಾದ ತೀವ್ರ ವಿಚಾರ ಊಹೆಗಳನ್ನು ಮಾಡತೊಡಗಿದರು. ಶ್ರೀರಾಮನ ಪಟ್ಟಾಭಿಷೇಕವು ಎಷ್ಟು ಹೊತ್ತಿಗೆ ನಡೆಯುವುದೋ ಎಂಬುದೇ ಕೇಂದ್ರ ವಿಚಾರ. ಆದರೆ ಕುಶಲ ಮತಿಯೂ ಕಾರ್ಯಶೀಲನೂ ಆದ ಶತ್ರುಘ್ನನು ಮತ್ತೆ ರಾಜಗೃಹಕ್ಕೆ ಹೋಗಬೇಕಾಗಿ ಬಂದಿದೆಯಲ್ಲ. ಹನ್ನೊಂದು ವರ್ಷದ ಆತಿಥ್ಯದಿಂದ ತೃಪ್ತರಾಗಲಿಲ್ಲವೆ ಶತ್ರುಘ್ನ ಭರತರು ? ಅವರ ಪತ್ನಿಯರಿಗೆ ಎಂಥ ಸಂಕೋಚ; ಸ್ವಯಂವಿದಿತ ನಡಾವಳಿಗಳು. ಅಂತು ನಾಟಕದ ದೃಶ್ಯ ದಿನೇ ದಿನೇ ಪ್ರಖರವಾಗಿ ಕಾಣಹತ್ತಿತು. ರಾಜಗೃಹಕ್ಕೆ ಹೊರಡುವ ದಿನ ಸಮೀಪಿಸಿತು. ಆದರ ಹಿಂದಿನ ದಿನವೆಲ್ಲಾ ಸಹೋದರ ಸಹೋದರಿಯರು ಅರ ಮನೆವಾಸಿಗಳಿಗೆಲ್ಲಾ ಭೇಟಿ ಕೊಟ್ಟರು. ಸಂತೋಷದಿಂದ ಬೀಳ್ಕೊಳ್ಳುವುದಕ್ಕೆ ಪ್ರತಿಯಾಗಿ ಉದ್ವಿಗ್ನರಾದರು. ಆದರೆ ಅದು ರಾಜಾಜ್ಞೆ. ಮೌನವಾಗಿ ಮರುಗಿದರು. ಶತ್ರುಘ್ನ ಶ್ರುತಕೀರ್ತಿಯರ ಚಿತ್ರ ಅವರುಗಳೆದೆಯಲ್ಲಿ ಭದ್ರ ವಾಗಿ ಮುದ್ರಿತವಾಯಿತು. ಪ್ರಯಾಣದ ದಿನ ಕೈಕಾದೇವಿಯವರಿಗೆ ವಂದಿ ಸಲು ಶತ್ರುಘ್ನ ಹೋದನು. ಆಗ ಆ ತಾಯಿ ತನ್ನಂಕದಲ್ಲಿ ಕುಳ್ಳಿರಿಸಿಕೊಂಡು ಮುದ್ದಾಡಿದಳು. "ಮಗು, ನೀನು ಏರ್ಪಡಿಸಿದ ನಾಟಕ ಬಹಳ ಚೆನ್ನಾಗಿತ್ತು.

ನೀನು ಇನ್ನು ಮೇಲೆ ಇಲ್ಲೇ ಇರುವುದು ಒಳ್ಳೆಯದು. ಆದರೆ ಯುಧಾಜಿತ್ತು ಬಂದುಬಿಟ್ಟಿದ್ದಾನೆ. ರಾಜನ ಅನುಮತಿಯನ್ನೂ ಪಡೆದುಬಿಟ್ಟಿದ್ದಾನೆ. ಈ ಬಾರಿಗೆ ಹೋಗು. ಇದೇ ಕೊನೆಯೆಂದು ತಿಳಿ. ನಾನು ಕೂಡಲೆ ಕರೆಸಿಕೊಳ್ಳು ತ್ತೇನೆ" ಎಂದಳು. ತನ್ನ ಹರ್ಷವನ್ನು ಅದುಮಿಟ್ಟು ರಾಜಮಾತೆಯರ ಆಶೀರ್ವಾದ ಪಡೆದು ಹೊರವಂಟ.

ರಥದಲ್ಲಿ ಸಹೋದರರು, ಸಹೋದರಿಯರು ಮತ್ತು ಪರಿವಾರದವರು ದೃಷ್ಟಿಗೋಚರವಾಗುವ ತನಕ ಅಯೋಧ್ಯೆಯ ಕಡೆ ಹಿಂದಿರುಗಿ ನೋಡುತ್ತಾ ಪ್ರಯಾಣ ಮಾಡಿ ರಾಜಗೃಹವನ್ನು ಸೇರಿದರು. ಶ್ರೀರಾಮನಾಜ್ಞೆಯಂತೆ ಊಟೋಪಚಾರಗಳನ್ನು ಮರೆತು ಅಖಂಡ ಶಸ್ತ್ರಾಸ್ತ್ರಾಭ್ಯಾಸದಲ್ಲಿ ನಿರತರಾ ದರು. ಯುಧಾಜಿತ್ತುವಿಗೂ ವೃದ್ಧ ಮಹಾರಾಜನಿಗೂ ದಾಶರಥಿಗಳ ಸಹ ವಾಸ ಕಡಿಮೆಯಾಗುತ್ತಿದ್ದುದನ್ನೂ, ಅವರ ನಿರಂತರ ಕ್ಷಾತ್ರ ವಿದ್ಯಾಭ್ಯಾಸ ವನ್ನೂ ನೋಡಿ ಸ್ವಲ್ಪ ಕಸಿವಿಸಿಯಾಯಿತು. ಶತ್ರುಘ್ನನು ಅಯೋಧ್ಯೆಯ ಆಹ್ವಾನವನ್ನು ಪ್ರತಿ ಕ್ಷಣದಲ್ಲೂ ನಿರೀಕ್ಷಿಸಿ ಹತಾಶನಾಗುತ್ತಿದ್ದ. ಶ್ರುತ ಕೀರ್ತಿಯು ತನ್ನ ನಡಾವಳಿಗಳಿಂದ ಗಂಡನ ದುಗುಡವನ್ನು ನಿವಾರಿಸುತ್ತಿದ್ದಳು. ಹತ್ತು ಹನ್ನೊಂದು ಮಾಸಗಳು ಕಳೆದು ಹೋದುವು. ವರ್ಷಾಂತ್ಯವೂ ತೀರ ಸಮೀಪಿಸಿತು. ನಿರಾಶೆಯ ಕಡಲಲ್ಲೇ ಶತ್ರುಘ್ನ ಅಡಗಿ ಹೋಗಿದ್ದ. ಕೈತಪ್ಪಿದ ರಾಜ್ಯಗಳನ್ನು ಗಳಿಸುವುದು, ದೇವೇಂದ್ರನ ಕಾರ್ಯಕ್ಕೆ ಶ್ರೀರಾಮ ತೊಡಗು ವುದು ಯಾವಾಗ ಯಾವಾಗ ಎಂದು ಕಳವಳಿಸುತ್ತಿದ್ದ. ಭರತನಿಗೆ ಸರ್ವ ವಿಧದಲ್ಲೂ ಸಹಾಯ ಮಾಡು, ಪ್ರಾಣಾರ್ಪಣೆಗೂ ಸಿದ್ಧನಾಗಿರು ಎಂದು ಲಕ್ಷ್ಮಣನು ಬೋಧಿಸಿದ್ದ ಹಿತ ವಾಕ್ಯಗಳು ಸದಾ ಶತ್ರುಘ್ನನ ಹೃನ್ಮನಗಳಲ್ಲಿ ಅನುರಣಿತವಾಗುತ್ತಿದ್ದುವು.

## ದುಃಸ್ವಪ್ನ ದುಶ್ಶಕುನಗಳು ಆದಿಯಲ್ಲಿ ಅಶುಭ ಅಂತ್ಯದಲ್ಲಿ ಶುಭ

ಭರತನಿಗೆ ಒಂದೆರಡು ದಿನಗಳಿಂದಲೂ ನಿದ್ರಾಭಂಗವಾಗತೊಡಗಿತು. ಶತ್ರುಘ್ನನೂ ಅದರ ಬಲೆಗೇ ಸಿಕ್ಕಿದ್ದ. ನಾಟಕದ ದೃಶ್ಯ ಇನ್ನೂ ಪ್ರಖರವಾಗೇ ಬೆಳಗತೊಡಗಿತು. ಒಂದು ದಿನ ಬೆಳಗಿನ ಝಾಮದಲ್ಲಿ ಭರತನು ತಂದೆಗೆ

ಕೇಡಾಗುವ ದುಃಸ್ವಪ್ನವನ್ನು ಕಂಡು ಚಿಂತಾಕುಲನಾದನು. ತಮ್ಮನಿಗೂ ತಿಳಿಸಿದನು. ಅಯೋಧ್ಯೆಯಲ್ಲಿರುವ ಪಿತನಿಗೂ ಶ್ರೀರಾಮ ಲಕ್ಷ್ಮಣರಿಗೂ ಕೇಡಾಗಬಹುದೆಂದು ಪರಸ್ಪರ ಮಾತಾಡಿಕೊಂಡರು. ಈರ್ವರೂ ವಿಷಣ್ಣರಾಗಿರುವುದನ್ನು ಕಂಡು ಅಲ್ಲಿಯ ಆಪ್ತರು ಸಂತೋಷಕೂಟಗಳನ್ನೂ ವಿನೋದಗೋಷ್ಠಿಗಳನ್ನೂ ಏರ್ಪಡಿಸಿದ್ದರು. ಸಹೋದರರಿಗೆ ಅವುಗಳಿಂದ ಉಲ್ಲಾಸ ಜನಿಸಲಿಲ್ಲ. ಆ ಸ್ವಪ್ನ ವಿಚಾರವನ್ನು ಹಿರಿಯನೊಬ್ಬನ ಸಂಗಡ ಹೇಳಿಕೊಳ್ಳುತ್ತಿದ್ದಾಗ ಅಯೋಧ್ಯಾ ಭಟರು ಕಾಣಿಸಿಕೊಂಡರು. ತ್ವರಿತವಾಗಿ ತಮ್ಮಿಂದ ಆಗಬೇಕಾದ ಕಾರ್ಯವೊಂದುಂಟು. ಅರಮನೆಯಲ್ಲಿ ಎಲ್ಲರೂ ಕುಶಲರಾಗಿದ್ದಾರೆ. ಅತಿತ್ವರೆಯಿಂದ ಪ್ರಯಾಣ ಬೆಳೆಸಬೇಕು" ಎಂದು ಹೇಳಿ ತಂದಿದ್ದ ಕಾಣಿಕೆಯನ್ನು ಯುಧಾಜಿತ್ತುವಿಗೂ ಅಶ್ವಪತಿ ಮಹಾರಾಜನಿಗೂ ಅರ್ಪಿಸಿದರು. ಶತ್ರುಘ್ನನಿಗೆ ಸುಖದುಃಖಗಳ ತುಮುಲತೋಟಿ ಪ್ರಾರಂಭವಾಯಿತು. ಏನೇ ಆಗಲಿ, ಶ್ರೀರಾಮನ ದರ್ಶನವಂತು ಆಗಿಯೇ ಆಗುತ್ತದೆ. ಉಳಿದ ವ್ಯಥೆಯನ್ನು ಆ ವ್ಯಥೆಯೇ ಅನುಭವಿಸಲೆಂದು ತೀರ್ಮಾನ ಮಾಡಿಕೊಂಡು ಅಣ್ಣನಾಣತಿಯಂತೆ ಸ್ವಕ್ಷೇತ್ರಕ್ಕೆ ಹೊರಡಲು ಸಿದ್ಧನಾದನು. ಅಜ್ಜನಿಗೂ ಸೋದರಮಾವನಿಗೂ ತಿಳಿಸಿ ಅವರ ಆಶೀರ್ವಾದವನ್ನು ಪಡೆದು ಭರತನು ಸಿದ್ಧವಾಗಿದ್ದ ರಥವನ್ನೇರಿದನು. ಭರತಾನುಜನೂ ಕೂಡಿಕೊಂಡನು. ಅವರ ರಕ್ಷಣೆಗಾಗಿ ಸಕಲ ಸಿಬ್ಬಂದಿಯನ್ನೂ ಒದಗಿಸಿಕೊಟ್ಟಿದ್ದ ಅಶ್ವಪತಿ. ಶೀಘ್ರಗತಿಯಲ್ಲಿ ಮಹಾಪ್ರಯಾಣವು ಪ್ರಾರಂಭವಾಯಿತು.

### ತ್ರಿಕಾಲ ಸಂಧಿಯ ದಿಗ್ದರ್ಶನ:

ರಾಜಗೃಹದಿಂದ ಅಯೋಧ್ಯೆಗೆ ಕ್ರಮಿಸುವ ಏರ್ಪಾಡು ಸರ್ವಸಿದ್ಧತೆ ಮತ್ತು ಸೌಕರ್ಯಗಳಿಂದ ಕೂಡಿತ್ತು. ಆದರೆ ಭರತ ಶತ್ರುಘ್ನರನ್ನು ವಿಹ್ವಲತೆ ಆವರಿಸಿತ್ತು. 'ತೇಜಸ್ವಿ'ಯಾದ ಶತ್ರುಘ್ನನು ದುಡುಕು ಸ್ವಭಾವದವನಾದರೂ ಅದನ್ನು ಮೂಲೆಗುಂಪುಮಾಡಿ ಶುಭವನ್ನೇ ನಿರೀಕ್ಷಿಸುತ್ತಿದ್ದ. ಅಣ್ಣನ ಚಿತ್ತ ಕ್ಷೋಭೆಯನ್ನು ನೋಡಿ "ಅಣ್ಣ, ನೀನು ಪ್ರಾಜ್ಞ, ದುಶ್ಶಕುನಗಳ ಮಾತ್ರದಿಂದಲೇ ಇಷ್ಟು ಕ್ಷೋಭೆಗೀಡಾದರೆ, ಶ್ರೀರಾಮನ ಸಂಕಲ್ಪಸಿದ್ಧಿಗೆ ಹೇಗೆ ಹೆಗಲುಕೊಡಲು ಸಾಧ್ಯವಾದೀತು? ದುಃಸ್ವಪ್ನಗಳು ತತ್ಕಾಲದ ಕಷ್ಟಗಳನ್ನು

ಸೂಚಿಸಬಹುದು. ಆದರೆ ಆ ತಾಪತ್ರಯಗಳ ಗರ್ಭದಲ್ಲೇ ಶುಭ ಘಟನೆಗಳು ಅಡಗಿವೆ ಎಂಬುದನ್ನು ಅರಿ. ಮಹಾರಾಜನು ಅಣ್ಣನ ಪಟ್ಟಾಭಿಷೇಕಕ್ಕೆ ಪ್ರಯತ್ನಿಸಿರಬೇಕು. ಆಗ ರಘುಕುಲತಿಲಕನು ಭರತಶತ್ರುಘ್ನರಿಲ್ಲದೆ ಪಟ್ಟಾಭಿಷಿಕ್ತನಾಗುವುದು ಉಚಿತವಲ್ಲವೆಂದು ಪ್ರತಿಭಟಿಸಿರಬಹುದು. ಪ್ರಜೆಗಳೂ ಶ್ರೀರಾಮನ ನಿಲುವನ್ನು ಪೋಷಿಸಿರಬೇಕು. ಅದೊಂದು ದುರ್ಘಟನೆ ಎಂದು ಭಾವಿಸಬಹುದೆ ? ಈ ಅಪಶಕುನಗಳೇ ಅದರ ಸೂಚಕವೆಂದು ಅರ್ಥೈಸಬೇಕೆ? ಯಮನಿಗೆ ಎದುರೇ ದಶರಥ ಮಹಾರಾಜ ? ಇಂಥ ಒಂದು ಸಂದರ್ಭದಲ್ಲಿ ಮೃತ್ಯುವು ದರ್ಶನ ಕೊಟ್ಟಿರಬಹುದು? ಆದರೂ ಆ ಮೃತ್ಯುವು ನಮ್ಮ ದರ್ಶನ ಪಡೆದ ಮೇಲೇ ತನ್ನ ವಿಜಯವನ್ನು ಸಾರುವುದು. ನಾವು ನಾಲ್ವರೂ ಒಟ್ಟುಗೂಡಿ ಅಂತಕನನ್ನು ಎದುರಿಸುವುದೇ ದೇವ ಕಾರ್ಯವಾಗಿರಬಹುದು. ಯಮನ ಶತ್ರುವೇ ಕ್ಷತ್ರಿಯನೆಂದರಿ.'' ಎಂದನು. ಪ್ರಯಾಣವು ಬಹು ಶೀಘ್ರವಾಗಿಯೇ ಸಾಗಿತು. ಹಾಗಿದ್ದೂ ಏಳುದಿನಗಳು ಹಿಡಿದುವು. ಅದಕ್ಕೆ ಕಾರಣ ಸಾರಥಿಗಳಿಗೆ ವಿಶ್ರಾಂತಿ, ಹಯಗಜಗಳ ಆಯಾಸ ನಿವಾರಣೆ. ಅರುಣೋದಯ ಸಮಯಕ್ಕೆ ಸರಿಯಾಗಿ ಅಯೋಧ್ಯಾನಗರದ ದರ್ಶನ. ಅದಾಗುತ್ತಿದ್ದಂತೆಯೇ ಭರತಾನುಜನಿಗೂ ಭಯ ಆವರಿಸಿತು ; ಚಿಂತೆ ಹಿರಿದಾಯಿತು ; ಮತಿ ಮಂಕಾಯಿತು.

ವೈಭವದ ನಗರಿ ನಿರ್ಜೀವವಾಗಿದೆ. ಶೋಕ ಹೆಪ್ಪುಗಟ್ಟಿ ಆಚ್ಛಾದಿಸಿದೆ. ಕೋಟೆಯ ಬಾಗಿಲುಗಳಲ್ಲಿ ರಾಜಕುಮಾರರನ್ನು ಸ್ವಾಗತಿಸುವ ಏರ್ಪಾಡೇ ಇಲ್ಲ. ಬೀದಿಗಳಲ್ಲಿ ಪ್ರಜೆಗಳ ದರ್ಶನವೇ ಇಲ್ಲ. ಮರಗಿಡಗಳೂ ಉದ್ಯಾನವನಗಳೂ ಶೋಕತಪ್ತವಾಗಿವೆ. ಅಗ್ನಿಹೋತ್ರಾದಿಗಳ ಹೊಗೆಯ ನಲಿದಾಟವೇ ಇಲ್ಲ. ವಾಯುದೇವನಿಗೆ ಗರಬಡಿದಂತಿದೆ. ಸೂರ್ಯನು ಮುಸುಕು ಹಾಕಿಕೊಂಡಂತಿದೆ. ಭರತನಷ್ಟೇ ಶತ್ರುಘ್ನನೂ ಪ್ರಕ್ಷುಬ್ಧನಾದನು, ಚಿಂತಾಕ್ರಾಂತನಾದನು. ಮೌನದ ಮರೆಹೊಕ್ಕನು. ಕರ್ಣನೇತ್ರಗಳನ್ನು ಹುರುಪುಗೊಳಿಸಿದನು. ಅಮರಾವತಿಯಂತಿದ್ದ ಅಯೋಧ್ಯೆಯ ಅವಲಕ್ಷಣಗಳ ಆಘಾತವನ್ನು ಎದುರಿಸುತ್ತ ಭರತನೊಡನೆ ಪಿತನ ಅರಮನೆಯನ್ನು ಹೊಕ್ಕನು. ಶೂನ್ಯವು ತಾಂಡವವಾಡುತ್ತಿತ್ತು. ಆವೇಶಪೂರಿತನಾದ ಭರತನು ತಮ್ಮನೊಡನೆ ಅಮ್ಮನ ಅರಮನೆಯನ್ನು ಪ್ರವೇಶಿಸಿದನು.

ಕೈಕಾದೇವಿಯ ಕುಶಲಪ್ರಶ್ನೆಗಳಿಗೆ ಉತ್ತರಕೊಟ್ಟ ಭರತ. "ಮಹಾರಾಜರು ನಿನ್ನಲ್ಲಿಯೇ ಯಾವಾಗಲೂ ಇರುತ್ತಿದ್ದರಲ್ಲ. ಅವರೆಲ್ಲಿ" ಎಂದನು. "ಎಲ್ಲರಿಗೂ ಆಗುವ ಅನಿವಾರ್ಯಗತಿಯು ಅವನಿಗೂ ಆಯಿತು"ಎಂದಳು. ಭರತನು ಮೂರ್ಛೆಹೋದದ್ದು, ಹಂಬಲಿಸಿ ತೊಳಲಾಡಿದ್ದು ಸಾಂಕ್ರಾಮಿಕವಾಗಿತ್ತು. ಶೋಕವ್ರತವನ್ನು ಆಚರಿಸುವುದರಲ್ಲಿ ಸಹೋದರರಿಗೆ ಸ್ಪರ್ಧೆ ರೂಪುಗೊಂಡಿತು. "ಪಿತನ ಶವಸಂಸ್ಕಾರ ಮಾಡಿದ ರಾಮಲಕ್ಷ್ಮಣರೇ ಧನ್ಯರು" ಎಂದ. ಶತ್ರುಘ್ನ ಅದನ್ನು ಪುಷ್ಟೀಕರಿಸಿದ. 'ಶ್ರೀರಾಮನೇ ನಮ್ಮ ತಂದೆ, ರಾಜ'ಎಂದ. "ಪಿತನ ಚರಮ ಸಂದೇಶವೇನಮ್ಮ". "ಅಪ್ಪಾ ಭರತ, ಮಹಾರಾಜನು ಸೀತಾರಾಮಲಕ್ಷ್ಮಣರು ವನವಾಸದಿಂದ ಹಿಂದಿರುಗಿ ಬರುವುದನ್ನು ನೋಡುವವರೇ ಧನ್ಯರೆಂದು ಕೊನೆ ಉಸಿರೆಳೆದನು" ಕುಸಿದು ಬೀಳುತ್ತಿದ್ದ ಗರ್ವಗಿರಿಗೆ ವಜ್ರಾಘಾತವಾಯಿತು. ಶೋಕಸಾಂಕ್ರಾಮಿಕ ಬಲೆಗೆ ಸಿಲುಕಿ ಅತಿಯಾಗಿ ಮಿಲಿಮಿಲಿಗುಟ್ಟಿದರು. ಆ ಸತ್ಯ ಪರಾಕ್ರಮಿಗೆ, ಆ ಧರ್ಮಭೀರುವಿಗೆ ವನವಾಸವೇ, ವನವಾಸವೇ ?? ಹೇಳೆಂದ. "ಮಗು, ನಿಮ್ಮ ತಂದೆ ನನಗೆರಡು ವರಗಳನ್ನು ಕೊಟ್ಟಿದ್ದ. ಅವನಲ್ಲಿಯೇ ನ್ಯಾಸವಾಗಿಟ್ಟಿದ್ದೆ. ನಿನ್ನ ಮೇಲಿನ ಮಮತೆಯಿಂದ ಈಗ ಆ ಎರಡು ವರಗಳನ್ನು ಸಲ್ಲಿಸೆಂದೆ. ಸಲ್ಲಿಸಿದ ಪರಿಣಾಮವಾಗಿ ನಿನಗೆ ಯುವರಾಜ ಪಟ್ಟಾಭಿಷೇಕವೂ ಶ್ರೀರಾಮನಿಗೆ ಹದಿನಾಲ್ಕು ವರ್ಷಗಳ ದಂಡಕಾರಣ್ಯವಾಸವೂ ಲಭಿಸಿದುವು. ಈಗ ನೀನು ಪಟ್ಟಾಭಿಷಿಕ್ತನಾಗು"ಎಂದಳು ಕೈಕೇಯಿ. ಸಾಂಕ್ರಾಮಿಕ ಜಾಡ್ಯವು ಮತ್ತಷ್ಟು ಪ್ರಬಲವಾಯಿತು. ನನ್ನ ತಾಯಿಯ ದೆಸೆಯಿಂದ ಈ ಅನಿಷ್ಟಪರಂಪರೆಗಳು ಒದಗಲಿಲ್ಲವೆಂದು, ಶತ್ರುಘ್ನ ನಿಟ್ಟುಸಿರು ಬಿಟ್ಟ. ಆದರೆ ಆ ಕಡುಶೋಕವು ಹಿಮ್ಮೆಟ್ಟಿತೆ? ಇಲ್ಲ, ಅದು ಹದಿನಾಲ್ಕು ವರ್ಷಗಳ ಕಾಲವೂ ಮೈಗೂಡುವಂತದ್ದಾಗಿತ್ತು. ಶ್ರೀರಾಮನ ಮೇಲಿನ ಭ್ರಾತೃವಾತ್ಸಲ್ಯದ ಅತಿರೇಕವು ಮಾತೃನಿಂದನೆಯಾಗಿ ಪರಿಣಮಿಸಿತು. ಎಲ್ಲಿ ಅಣ್ಣನು ಮಾತೃವಧೆ ಮಾಡಿಬಿಡುವನೊ ಎಂಬ ಭಯ ಶ್ರುತಕೀರ್ತಿಯ ಪತಿಗೆ ಆವರಿಸಿತು. ಅದು ಮರುಕ್ಷಣದಲ್ಲೆ ಮರೆಯಾಯಿತು. ವಧೆಗೂ ಹಿರಿದಾದ ವಧೆಯನ್ನು ಭರತ ಮಾತೆಗೆ ಕರುಣಿಸಿದ. "ಶ್ರೀರಾಮನನ್ನು ವನವಾಸದಿಂದ ಕರೆದು ತಂದು ಪಟ್ಟಾಭಿಷೇಕಮಾಡಿ ನಾನು ಅವನ

6

ದಾಸಾನುದಾಸನಾಗಿ ನಡೆದುಕೊಳ್ಳುತ್ತೇನೆ. ನಿನಗೆ ಸಂಕಟವಾಗಲೆಂದೇ ಹೀಗೆ ಮಾಡುತ್ತೇನೆ. ಆಗ ನನಗೆ ನೆಮ್ಮದಿಯಾಗುವುದು" ಎಂದ. ಭರತಾನುಜನಿಗೆ ಆಗಲೇ ನೆಮ್ಮದಿ ಸಿಕ್ಕಿದಂತಾಯಿತು. "ನನ್ನ ಕೀರ್ತಿ ಉಳಿಯುವಂತೆ ಹೇಗಾದರೂ ನೋಡಿಕೊಳ್ಳುವೆನು. ಯಾವ ಸಂದೇಹವೂ ಇಲ್ಲ" ಎಂದು ಭರತ ನುಡಿದಾಗ ಶತ್ರುಘ್ನನಿಗೆ ಮತ್ತಷ್ಟು ಶಾಂತಿ ಸಮೀಪಿಸಿತು. ಭರತನ ಕಾರ್ಯದಲ್ಲಿ ಸಹಭಾಗಿಯಾಗುವುದೇ ತನ್ನ ಕರ್ತವ್ಯವೆಂದು ತಿಳಿದನು.

ಭರತ ಭರತಾನುಜರು ಕೌಸಲ್ಯಾಮಾತೆಯ ಗೃಹದತ್ತ ಧಾವಿಸಿದರು. ರಾಮಮಾತೆಯು ಇವರನ್ನು ನೋಡಿದ ಕೂಡಲೆ ಕುಸಿದು ಬಿದ್ದಳು. ಅಷ್ಟರಲ್ಲಿ ಭರತ ಶತ್ರುಘ್ನರು ಅಳುತ್ತ ಓಡಿಹೋಗಿ ಶುದ್ಧಚಿತ್ತಳಾದ ದೊಡ್ಡಮ್ಮನನ್ನು ಅಪ್ಪಿಹಿಡಿದುಕೊಂಡರು. ಅನಂತರ ದುಃಖಾರ್ತಳಾದ ಕೌಸಲ್ಯೆಯು ಹೀಗೆಂದಳು "ಭರತ, ನಿನಗೆ ಬೇಕಾಗಿದ್ದ ರಾಜ್ಯವು ನಿಷ್ಕಂಟಕವಾಗಿ ದೊರಕಿದೆ. ಕೈಕೇಯಿಯು ಕ್ರೂರವಾದ ಕಾರ್ಯತಂತ್ರದಿಂದ ನಿನ್ನ ಬಯಕೆ ಶೀಘ್ರವಾಗಿಯೇ ಕೈಗೂಡಿತು" ಎಂದಳು. (ಅಯೋ. ಸ. ೭೫.) ನಿರಪರಾಧಿಯಾದ ಶ್ರೀರಾಮನ ಬಳಿಗೆ ಕರೆದುಕೊಂಡುಹೋಗಿ ಬಿಡೆಂದಳು. ಅಂತರ್ಯದಲ್ಲಿ ಭರತನಿಗೆ ಹೀಗೆನಿಸಿತು. ನನ್ನ ತಾಯಿ ನನ್ನನ್ನು ಕೊಂದಳೆಂದುಕೊಂಡೆ. ನಿಜವಾಗಿಯೂ ಈಗ ರಾಜಮಾತೆಯೇ ಆ ಕೆಲಸಮಾಡಿದಳೆಂದು ಭಾಸವಾಗುತ್ತಿದೆ. ಶತ್ರುಘ್ನನು ತತ್‌ಕ್ಷಣದಲ್ಲೆ ಕೌಸಲ್ಯೆ ಹಾಗೆ ನುಡಿದದ್ದಕ್ಕೆ ಕಾರಣವನ್ನು ಕಂಡುಕೊಂಡ. ದೀರ್ಘಕಾಲ ರಾಜಗೃಹದಲ್ಲಿದ್ದದ್ದರಿಂದ ಕೌಸಲ್ಯೆಯು ಭರತನ ಗುಣಾವಗುಣಗಳನ್ನು ಅರಿಯಲು ಸಾಧ್ಯವಾಗಲಿಲ್ಲ. ಶ್ರೀರಾಮ ಇಲ್ಲಿಯೇ ಇದ್ದದ್ದರಿಂದ ಕೈಕೇಯಿಯು ಅವನನ್ನು ಪೂರ್ಣವಾಗಿ ಅರಿತೇ ತನ್ನ ನಿಲುವನ್ನು ತೆಗೆದುಕೊಂಡಳೆಂದು ಭಾಸವಾಯಿತು ಕುಶಲಮತಿಗೆ. ಶ್ರೀರಾಮಭಕ್ತನು ಅನೇಕ ವಿಧವಾದ, ಕಠೋರವಾದ, ಹೃತ್ಸಾಗರದಲ್ಲಿ ಅಲ್ಲೋಲಕಲ್ಲೋಲ ಅಲೆಗಳನ್ನೆಬ್ಬಿಸುವಂತಹ ಆಣೆಗಳನ್ನಿಟ್ಟನು, ಶಪಥಮಾಡಿದನು. ಏನನ್ನೂ ತಿಳಿಯದ ನಿರಪರಾಧಿಯೆಂದೂ ಶ್ರೀರಾಮನ ಅದ್ವಿತೀಯ ಭಕ್ತನೆಂದೂ ಮಹಾಮಾತೆಗೆ ತಿಳಿಸಿ ಸಾಂತ್ವನಗೊಳಿಸಿದನು. ಆಗ ಶತ್ರುಘ್ನನಿಗೆ ತನ್ನ ಧ್ಯೇಯದರ್ಶನವಾಯಿತು. ಅಣ್ಣನ ಆಣೆಗಳು ಬೋಧಪ್ರದವಾಗಿಯೂ ಜ್ಞಾನವರ್ಧನಕಾರಿಗಳಾಗಿಯೂ ಇದ್ದುವೆಂದು ತಿಳಿದನು. ಕೌಸಲ್ಯೆಯು ಭರತನನ್ನು ತೊಡೆಯ

ಮೇಲೆ ಕುಳ್ಳಿರಿಸಿಕೊಂಡು "ಮಗು, ನೀನು ಧರ್ಮವನ್ನು ಬಿಟ್ಟುಹೋಗಲಿಲ್ಲ. ನಿನ್ನ ಆತ್ಮ ಶುದ್ಧವಾದದ್ದು. ಇದು ನಮ್ಮ ಭಾಗ್ಯ, ನೀನು ಸತ್ಯಸಂಧನಾಗಿ ಸದ್ಗತಿಯನ್ನು ಪಡೆ" ಎಂದಳು. (ಅಯೋ. ಸ. ೭೫) ಶತ್ರುಘ್ನನಿಗೆ ಸಂಕಲ್ಪವು ದೃಢವಾಯಿತು. ಕಾರ್ಯಕ್ಷೇತ್ರವು ಗೋಚರಿಸಿತು.

ವಿಧಿವತ್ತಾದ ಪಿತೃಕರ್ಮವನ್ನು ಪ್ರಾರಂಭಮಾಡಿದರು. ಪಿತನಿಗೆ ಉತ್ತರಕ್ರಿಯೆಗಳನ್ನು ಮಾಡುವಾಗ ವಿಲಪಿಸದಿರುವ ಮಕ್ಕಳುಂಟೆ? ಮಹಾ ರಾಜನ ಶವಸಂಸ್ಕಾರವು ಕಂಬನಿಯ ಜಲತರ್ಪಣದಿಂದಲೂ ಶೋಕಾಗ್ನಿ ಯಿಂದಲೂ ನೆರವೇರಿತು. ಶತ್ರುಘ್ನನೂ ಹತ್ತುದಿನಗಳ ಕಾಲ ಭೂಶಯ್ಯೆ ಯಲ್ಲೇ ಪವಡಿಸಿದ್ದನು. ಹನ್ನೊಂದನೆ ದಿನದ ಕರ್ಮಾಚರಣೆಯಲ್ಲಿ ಭರತನು ಶೋಕದಲ್ಲಿ ಮುಳುಗಿರುವುದನ್ನು ಕಂಡು ಶತ್ರುಘ್ನನಿಗೆ ಸಂಕಟ ಉಕ್ಕಿತು. ತಂದೆಯನ್ನು ಸ್ಮರಿಸಿಕೊಂಡು ಮೂರ್ಛೆಹೋದನು. ಚೇತರಿಸಿಕೊಂಡು ತಂದೆಯು ತನ್ನನ್ನು ಲಾಲಿಸಿ ಪಾಲಿಸಿದ್ದನ್ನು ಸ್ಮರಿಸಿಕೊಂಡು ಗೋಳಾಡಿದನು. "ಅಪ್ಪ, ಸುಕುಮಾರನೂ ಬಾಲಕನೂ ಆದ ಭರತನು ಗೋಳಾಡುತ್ತಿರುವನಲ್ಲ? ಅಯ್ಯೋ, ನೀನೂ ಸ್ವರ್ಗಸ್ಥನಾದೆ. ಶ್ರೀರಾಮನೂ ಕಾಡಿಗೆ ಹೋದನು, ಇನ್ನು ಯಾವ ಸಾಮರ್ಥ್ಯದಿಂದ ನಾನು ಬದುಕಿರಲಿ? ಬೆಂಕಿಯಲ್ಲಿ ಬಿದ್ದು ಸಾಯುವೆನು. ಅಣ್ಣನೂ ಇಲ್ಲದೆ ತಂದೆಯೂ ಇಲ್ಲದೆ ಅಯೋಧ್ಯೆಯು ಶೂನ್ಯ ವಾಯಿತು. ನಾನು ಅಲ್ಲಿಗೆ ಹೋಗಲಾರೆ. ತಪೋವನಕ್ಕೆ ಹೋಗಿಬಿಡುವೆನು" ಎಂದು ಭರತಾನುಜನು ಗೋಳಾಡಿದನು. (ಅಯೋ. ಸ. ೭೭) ಆಗ ತತ್ವಜ್ಞ ನಾದ ಸುಮಂತ್ರನು ಶತ್ರುಘ್ನನನ್ನು ಕೈಹಿಡಿದೆತ್ತಿ ಸಂತೈಸುತ್ತ ಸಮಸ್ತ ಜಂತು ಗಳಿಗೂ ಜನನ ಮರಣಗಳು ಸ್ವಾಭಾವಿಕವೆಂದು ಬೋಧಿಸಿದನು. ಅಪರಕ್ರಿಯೆ ಗಳನ್ನು ಮುಗಿಸಿ ಅರಮನೆಗೆ ಬಂದನು.

ಶ್ರೀರಾಮನನ್ನು ಅಯೋಧ್ಯೆಗೆ ಕರೆದುಕೊಂಡು ಬರುವ ವಿಚಾರದಲ್ಲಿ ಭರತನು ತೀವ್ರವಾಗಿ ಆಲೋಚಿಸುತ್ತಿದ್ದ ಶತ್ರುಘ್ನನೂ ಪಾಲ್ಗೊಂಡಿದ್ದನು. "ಅಣ್ಣ, ವಿಪತ್ತು ಸಂಭವಿಸಿದಾಗ ಸಮಸ್ತರಿಗೂ ಶ್ರೀರಾಮನು ದಿಕ್ಕಾಗಬಲ್ಲ ವನು. ಅವನು ತನಗೆ ಕಷ್ಟಬಂದಾಗ ತನ್ನನ್ನು ರಕ್ಷಿಸಿಕೊಳ್ಳಲಾರನೆ? ಅಂಥ ಸತ್ವಶಾಲಿಯನ್ನು ಒಬ್ಬ ಹೆಂಗಸು ಕಾಡಿಗೆ ಕಳಿಸಿಬಿಟ್ಟಳಲ್ಲ? ಬಲಶಾಲಿಯೂ

ಮಹಾಪರಾಕ್ರಮಿಯೂ ಆದ ಲಕ್ಷ್ಮಣನಾದರೂ ಶ್ರೀರಾಮನ ವನವಾಸವನ್ನು ತಪ್ಪಿಸಬಾರದಿತ್ತೆ ? ಸಮಯ ಬಂದರೆ ತಂದೆಯನ್ನಾದರೂ ನಿಗ್ರಹಿಸಬಹುದಾಗಿತ್ತು. ಮಹಾರಾಜನು ಹೆಂಗಸಿಗೆ ಅಧೀನನಾಗಿ ತಪ್ಪುದಾರಿಯನ್ನು ಹಿಡಿದನು. ನ್ಯಾಯಾನ್ಯಾಯಗಳನ್ನು ವಿಚಾರಿಸಿ ಲಕ್ಷ್ಮಣನು ಅವನನ್ನು ಮೊದಲೇ ದಂಡಿಸಿ ತಡೆಯಬೇಕಾಗಿತ್ತು''ಎಂದನು. ಹೀಗೆ ಲಕ್ಷ್ಮಣನ ತಮ್ಮನು (ಲಕ್ಷ್ಮಣನ ಶೈಲಿಯಲ್ಲಿ) ಮಾತನಾಡುತ್ತಿರಲು, ಕುಬ್ಜೆಯು ಸರ್ವಾಭರಣ ಭೂಷಿತಳಾಗಿ ಪೂರ್ವ ದಿಕ್ಕಿನ ಬಾಗಿಲಲ್ಲಿ ಫಕ್ಕನೆ ಕಾಣಿಸಿಕೊಂಡಳು...ಕೂಡಲೇ ದ್ವಾರಪಾಲಕರು ನಿರ್ಘೃಣಳಾದ ಆ ಪಾಪಕಾರಿಣಿಯನ್ನು ಹಿಡಿದು ನಿಲ್ಲಿಸಿ ಶತ್ರುಘ್ನನನ್ನು ಕರೆದು ''ರಾಜಕುಮಾರ ಶ್ರೀರಾಮನು ಕಾಡಿಗೆ ಹೋಗುವುದಕ್ಕೂ ನಿಮ್ಮ ತಂದೆಯು ದೇಹವನ್ನು ಬಿಡುವುದಕ್ಕೂ ಈ ಪಾಪಿಯೇ ಮೂಲ ಕಾರಣ. ಇವಳು ಕೆಟ್ಟವಳು. ಇವಳನ್ನು ನಿನಗೆ ತೋರಿದಂತೆ ದಂಡಿಸಬಹುದು''ಎಂದರು. ಆ ಮಾತನ್ನು ಕೇಳಿ ದುಃಖದಲ್ಲಿ ಮುಳುಗಿದ್ದ ಶತ್ರುಘ್ನನಿಗೆ ಅವಳನ್ನು ಶಿಕ್ಷಿಸುವುದು ಕರ್ತವ್ಯವೆಂದು ತೋರಿತು.'' (ಅಯೋ. ಸ. ೭೮) ಗೆಳತಿಯರ ಮಧ್ಯದಲ್ಲಿ ನವಸುಂದರಿಯಂತಿದ್ದ ಮಂಥರೆಯನ್ನು ಹಿಡಿದು ಎಳೆದು ಅಂತಃಪುರ ಸ್ತ್ರೀಯರೆದುರು ಥಳಿಸಿದನು. ಅರಮನೆಯೇ ಹಾರಿಹೋಗುವಂತೆ ಅವಳು ಕಿರಿಚಿಕೊಂಡಳು. ರುದ್ರಾಕ್ಷನಾದ ಶತ್ರುಘ್ನನು ಆ ಗೂನಿಯನ್ನು ಕೊಂದೇ ಬಿಡುವನೆಂದು ಅವಳ ಗೆಳತಿಯರು ಹೆದರಿ ಕೌಸಲ್ಯೆಯ ಬಳಿಗೆ ಓಡಿಹೋದರು. ಅಷ್ಟರಲ್ಲಿ ಕುಬ್ಜೆಯನ್ನು ಬಿಡಿಸಲು ಕೈಕೇಯಿಯು ಬಂದಳು. ಎಂದೂ ಕಾಣದ ಮಗನ ರೌದ್ರತೆಯನ್ನು ನೋಡಿದಳು. ಆತನು ಕೈಕೇಯಿಯನ್ನು ಗದರಿಸಿ ನಿಷ್ಠುರವಾದ ಮಾತನ್ನಾಡಿದನು. ಅವಳು ಹೆದರಿ ಮಗನ ಮರೆಹೊಕ್ಕಳು. ಆಗ ಭರತನು ಬಂದು ''ತಮ್ಮ, ಸ್ತ್ರೀಹತ್ಯೆಯು ಪಾಪಕರ. ಶ್ರೀರಾಮನು ಎಂದಿಗೂ ಸಹಿಸಲಾರನು. ಅವನು ನಮ್ಮೊಡನೆ ಮುಖಕೊಟ್ಟು ಮಾತನಾಡುವುದೇ ಇಲ್ಲ. ಇದು ನಿಶ್ಚಯ''ವೆಂದು ಸಾಂತ್ವನಗೊಳಿಸಿದನು. ಶತ್ರುಘ್ನನು ಮಂಥರೆಯನ್ನು ಬಿಟ್ಟುಬಿಟ್ಟನು. ಭರತಾನುಜನು ಸ್ವಲ್ಪ ದುಡುಕಿದ. ಗೃಹ ನಿರ್ವಹಣೆಯಲ್ಲಿ ಹುಲ್ಲು ಬೆಟ್ಟವಾಗಬಲ್ಲುದು. ಬೆಟ್ಟವನ್ನು ಹುಲ್ಲಿನಂತೆ ಕಂಡು ಕೊಂಡು ಸಂಸಾರವನ್ನು ನೂಕುವುದರಲ್ಲೇ ಇರುವುದು ಗೃಹಸ್ಥರ ಧೈರ್ಯ, ಸ್ಥೈರ್ಯ, ಸಹನೆ, ಸಹಕಾರ, ಬಾಳು. ಸೇವಕರಲ್ಲಿ ಪರಸ್ಪರ ದ್ವೇಷ ಅಸೂಯೆ

ಇರುವುದು ಸಹಜ. ರಾಣಿಯರಲ್ಲಿದ್ದ ಸಲಿಗೆಯನ್ನು ಬಳಸಿಕೊಂಡು ಮಂಥರೆ ಸಹೋದ್ಯೋಗಿಗಳಿಗೆ ಕಿರುಕುಳಕೊಟ್ಟಿದ್ದಾಳೆ. ಅವರು ಸಮಯನೋಡಿ ಪ್ರತೀ ಕಾರವನ್ನು ಈ ಸಂದರ್ಭದಲ್ಲಿ ಮಾಡಿದ್ದಾರೆ. ಕೈಕೇಯಿಯಂಥ ಸ್ತ್ರೀಯರು ಕ್ಷುಲ್ಲಸೇವಕಿಯರ ನಡೆನುಡಿಗಳಿಂದ ಪ್ರಭಾವಿತರಾಗಬಲ್ಲರೆ ? ರಾಜ್ಯದ, ಸಂಸಾ ರದ ಬುಡವೇ ಮೇಲಾಗುವಂಥ ಕೃತಿಗೈವರೆ ? ಅವಳು ತನ್ನ ಸ್ಥಾನ, ಮಾನ, ಸಂಸ್ಕೃತಿಗಳಿಗೆ ತಿಲಾಂಜಲಿ ಕೊಟ್ಟಳೆ ; ಕೈಕೇಯಿಯೇ ಆ ಮಂಥರೆಗೆ ರಾಜ ಕೊಟ್ಟ ವರಗಳನ್ನು ಲೋಕಾಭಿರಾಮವಾಗಿ ತಿಳಿಸಿದ್ದಳು. ತನ್ನನ್ನು ರಾಣಿಯು ಪರೀಕ್ಷೆಗೀಡುಮಾಡುತ್ತಿರುವಳೊ ಏನೊ ಎಂದು, ಸ್ವಾರ್ಥಿಯಾದ ಗೂನಿ ಅವು ಗಳನ್ನು ಜ್ಞಾಪಿಸಿಕೊಟ್ಟಳು. ಬೇರೆ ದೃಷ್ಟಿಯಿಂದ ಅವುಗಳನ್ನು ಕೈಕಾದೇವಿ ಪ್ರಯೋಗಮಾಡಿದಳು. ದಶದಿಕ್ಕುಗಳಿಂದಲೂ ನಿಂದನೆಗೆ ಗುರಿಯಾಗಿಯೂ ಕೈಕೇಯಿಯು ಅಚಲವಾಗಿ ನಿಂತನಿಲುವಿಗೆ ಕಾರಣಗಳೇನೆಂದೂ ಶತ್ರುಘ್ನ ಕೇಳ ಲಿಲ್ಲ. ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಡವೆ? ಸೇವಕಿಯರಲ್ಲಿ ಪಂಗಡಗ ಳಿವೆ ಎಂಬುದನ್ನು ತಿಳಿಯದಾದ ಕೌಸಲ್ಯೆ ಕೈಕೇಯಿಯರ ಸವತಿ ಮಾತ್ಸರ್ಯವು ದೇಶಕ್ಕೆ ದಳ್ಳುರಿಯನ್ನು ಹಚ್ಚುವ ಪ್ರಮಾಣದಲ್ಲಿದೆಯೇ ಎಂದು ವಿಚಾರಿಸ ಲಿಲ್ಲ. ರಾಜಗೃಹದಿಂದ ಬಂದ ಹದಿಮೂರು ಹದಿನಾಲ್ಕನೆ ದಿನದಲ್ಲಿ ಮಂಥ ರೆಯ ಘಟನೆ ಜರುಗಿದೆ. ಸಮಗ್ರವಿಚಾರವನ್ನು ತಿಳಿದುಕೊಳ್ಳಲು ಸಾಕಷ್ಟು ಅವಕಾಶವಿತ್ತು. ಇಂಥ ದುಡುಕಿನ ರೋಷದ ವರ್ತನೆಗೆ ಶೋಕಾವೇಶವೂ ಕಾರಣವಾಗಿದೆ. ಅದಕ್ಕಿಂತ ಹಿರಿದಾಗಿ ದೀರ್ಘಕಾಲದ ರಾಜಗೃಹವಾಸವೂ ನಿಮಿತ್ತವಾಗಿದೆ. ಭರತನಿಗೆ ಮನನೋಯದಂತೆ ನಡೆದುಕೊಳ್ಳುವುದೇ ಶತ್ರು ಘ್ನನ ಹೆಗ್ಗುರಿಯಾಗಿತ್ತು.

### ಭ್ರಾತೃವಾತ್ಸಲ್ಯವು ಜೀವರೂಪಗಳೆರಡನ್ನೂ ತಾಳಿ ವಿಜಯ ಯಾತ್ರೆಗೆ ಹೊರಟಿತು

ವಸಿಷ್ಠರೂ ಮಂತ್ರಿಗಳೂ ಪೌರರೂ ರಾಜಸಭೆಯನ್ನಲಂಕರಿಸಿದ್ದರು. ಪಟ್ಟಾಭಿಷೇಕದ ಸಕಲ ಸಿದ್ಧತೆಗಳೂ ಮುಗಿದಿದ್ದುವು. ಅರುಣೋದಯದಲ್ಲಿ ವಂದಿಮಾಗಧರ ಸುಪ್ರಭಾತವು ಪ್ರಾರಂಭವಾದದ್ದನ್ನು ಕಂಡು ಭರತನು ಕುಪಿ [illegible] ಅವನನ್ನು ಎಬ್ಬಿಸಿದನು. ಶತ್ರುಘ್ನನನ್ನು ಕರೆದು ತನಗೆ ತನ್ನ ತಾಯಿ

ಮಾಡಿದ ಅನ್ಯಾಯವನ್ನು ಹೇಳಿದನು. ಪುರೋಹಿತರಿಗೆ ಮಂತ್ರಿಗಳಿಗೆ ನಿಷ್ಠೂರ ನುಡಿಗಳನ್ನಾಡಿದನು. ಸಕಲ ಸೈನ್ಯವೂ ಶ್ರೀರಾಮನಲ್ಲಿಗೆ ಪ್ರಯಾಣ ಬೆಳೆಸಲಿ. ಆರಣ್ಯದಲ್ಲೇ ಅಣ್ಣನ ಪಟ್ಟಾಭಿಷೇಕ ನಡೆಯಲಿ ಎಂದು ಕಟ್ಟಪ್ಪಣೆ ಮಾಡಿದ. ಶತ್ರುಘ್ನನು ಹರ್ಷಭರಿತನಾಗಿ ಪಡೆಯ ಮತ್ತು ಅರಮನೆ ಸ್ತ್ರೀಯರ ಪ್ರಯಾಣಕ್ಕೂ ಮಾಡಬೇಕಾದ ವ್ಯವಸ್ಥೆಯಲ್ಲಿ ಪಾಲ್ಗೊಂಡ. ಕೈಕಾದೇವಿಯೂ ಜತೆಗೂಡಿದ್ದುದು ಭರತಾನುಜನಿಗೆ ಆಶ್ಚರ್ಯವನ್ನುಂಟುಮಾಡಿತು. ಸ್ತ್ರೀಯರ ಮರ್ಮವನ್ನರಿಯುವುದು ಸುಲಭವಲ್ಲವೆಂದರಿತ. ಊರ್ಮಿಳಾದೇವಿ ಮತ್ತು ಮಂಥರೆ ಹಿಂದುಳಿದದ್ದನ್ನು ಗಮನಿಸಿದ. ಪಡೆ ನಡೆಯಿತು. ಉತ್ಸಾಹ ಹುಚ್ಚೆದ್ದಿತು. ಗಂಗಾತಟವನ್ನು ಸೇರಿದರು. ಬೀಡಾರ ಹೂಡಿ ವಿಶ್ರಮಿಸಿಕೊಳ್ಳಬೇಕೆಂದು ಭರತನಾಜ್ಞೆಯಾಯಿತು. ಆಣತಿಯು ಅಡೆತಡೆಯಿಲ್ಲದೆ ಕಾರ್ಯಗತವಾಯಿತೆಂಬುದನ್ನು ನೋಡಿ, ತಿಳಿದು, ಅಣ್ಣನಿಗೆ ವರದಿಯನ್ನೊಪ್ಪಿಸಿದ. ಬೇಡರ ಪಡೆ ಆಚೆದಡದಲ್ಲಿ ಸಜ್ಜಾಗಿ ನಿಂತಿರುವುದನ್ನು ಶತ್ರುಘ್ನನು ಗಮನಿಸಿ ರಣೋತ್ಸಾಹಕ್ಕೆಡೆಗೊಡುವುದರಲ್ಲಿದ್ದ, ಅಷ್ಟರಲ್ಲೇ ಸುಮಂತ್ರನು ಬೇಡರೊಡೆಯ ಗುಹನು ಭರತನನ್ನು ಕಾಣಲು ಬಂದಿರುವುದನ್ನು ತಿಳಿಸಿದ. ಭರತ ಶತ್ರುಘ್ನ ಗುಹರ ಭೇಟಿಯಾಯಿತು. ಸಂಭಾಷಣೆ ಸ್ನೇಹಮಯವಾಗಿತ್ತು. ಭರತ ಶತ್ರುಘ್ನರಿಬ್ಬರೂ ಗುಹನ ಆತಿಥ್ಯವನ್ನು ಸ್ವೀಕರಿಸಿದರು. ಲಕ್ಷ್ಮಣನು ನಿದ್ರೆಯಿಲ್ಲದೆ ಅಣ್ಣ ಅತ್ತಿಗೆಯವರನ್ನು ಬಹು ಎಚ್ಚರದಿಂದ ಕಾದುಕೊಂಡಿದ್ದದ್ದನ್ನೂ ಶ್ರೀರಾಮನಿಗಾದ ಕಷ್ಟಗಳನ್ನು ಕಂಡು ಪರಿತಪಿಸಿದುದನ್ನೂ ಗುಹ ತಿಳಿಸಿದ. ಅರಮನೆಯಲ್ಲಿರುವ ಕೌಸಲ್ಯೆ ಸುಮಿತ್ರೆಯರು ಒಂದೆರಡು ರಾತ್ರಿಯನ್ನು ಕಳೆಯುವರೊ ಇಲ್ಲವೊ ಗೊತ್ತಿಲ್ಲ. ಆದರೆ ನನ್ನ ತಾಯಿ ಶತ್ರುಘ್ನನನ್ನು ನೋಡುವ ಬಯಕೆಯಿಂದ ಒಂದುವೇಳೆ ಪ್ರಾಣವನ್ನು ಹಿಡಿದಾಳು. ಆದರೆ ವೀರಮಾತೆಯಾದ ಕೌಸಲ್ಯೆಯು ಬದುಕಲಾರಳು. "ನನ್ನ ತಂದೆಯ ಆಸೆ ಕೈಗೂಡಲಿಲ್ಲ. ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಿ ರಾಜ್ಯವನ್ನು ವಹಿಸಿಕೊಡದೆಯೇ ಅವನು ಮರಣ ಹೊಂದುವನು. ಅಂಥ ಕಾಲವೂ ಬಂದರೆ, ಮೃತನಾದ ನನ್ನ ತಂದೆಗೆ ಉತ್ತರಕ್ರಿಯೆಯನ್ನು ಮಾಡತಕ್ಕವರೇ ಧನ್ಯರು, ಪುಣ್ಯಾತ್ಮರು" (ಅಯೋ. ಸ. ೮೬) ಎಂದು ಬೇಡರೊಡೆಯ ವರದಿಮಾಡಿದ್ದನ್ನು ಕೇಳಿ ಶತ್ರುಘ್ನನಿಗೆ ತನ್ನ ಸ್ಥಾನಮಾನ ನಡಾವಳಿ ಹೇಗಿರಬೇಕೆಂದು

ಚಿಂತಿಸುತ್ತ ರಾಮದರ್ಶನಕ್ಕೆ ತೀವ್ರಾಕಾಂಕ್ಷಿಯಾಗಿದ್ದ. ಶ್ರೀರಾಮನು ಗುಹನ ರಾಜ್ಯದಲ್ಲಿ ತಂಗಿದ್ದಾಗ ಹೇಗೆ ವರ್ತಿಸಿದ ಎಂಬುದನ್ನು ಕೇಳಿ ಭರತ ಮೂರ್ಛೆ ಹೋದ. ಪಕ್ಕದಲ್ಲಿದ್ದ ಶತ್ರುಘ್ನನು ಅಣ್ಣನನ್ನು ಅಪ್ಪಿಕೊಂಡು ಗಟ್ಟಿಯಾಗಿ ಅಳಲಾರಂಭಿಸಿದ. ಅರಮನೆಯ ಮಾತೆಯರೂ ಅತ್ತರು. ಹಲವು ವಿಧದಲ್ಲಿ ಹಲುಬಿದರು. ಚೇತರಿಸಿಕೊಂಡು ಭರತ ಮತ್ತಷ್ಟು ವಿವರಿಸೆಂದು ಗುಹನಿಗೆ ಹೇಳಿದನು. ಅವನು ಸವಿಸ್ತಾರವಾಗಿ ಹೇಳಿದ್ದು ಸಹೋದರರ ಕರುಳು ಹಿಂಡಿ ಹಿಪ್ಪೆಯಾಗಿ ಹೋಯಿತು. ಅಣ್ಣನಂತೆ ತಾನೂ ತಾಪಸಿಯಾಗೇ ಕಾಲಕಳೆಯು ತ್ತೇನೆಂದ. ಅಣ್ಣನ ಪ್ರತಿಯಾಗಿ ತಾನು ವನವಾಸವ್ರತವನ್ನು ಸ್ವೀಕರಿಸುವೆ ನೆಂದ. ಅಣ್ಣನಿಗೋಸ್ಕರ ನಾನು ಕಾಡಿನಲ್ಲಿರುವಾಗ ಶತ್ರುಘ್ನನು ನನ್ನೊಡನೆ ಬಂದಾನು. ರಾಮಲಕ್ಷ್ಮಣರು ಅಯೋಧ್ಯೆಗೆ ಹಿಂದಿರುಗದಿದ್ದರೆ ತಾನೂ ಅವ ರನ್ನೇ ಹಿಂಬಾಲಿಸುತ್ತೇನೆಂದ. ಗುಹನು ಸಂಗಡವೇ ಬಂದು ಶ್ರೀರಾಮನ ದರ್ಶನ ಮಾಡಿಸುತ್ತೇನೆಂದ. ಭರದ್ವಾಜಾಶ್ರಮದತ್ತ ಸಂಕ್ಷಿಪ್ತ ಅಯೋಧ್ಯೆ ಸಾಗುವ ಮುನ್ನ ಅರುಣೋದಯಕ್ಕೆ ಮುನ್ನ ಎಚ್ಚೆತ್ತು ಭರತ ಶತ್ರುಘ್ನನನ್ನು ಎಚ್ಚರಿಸಿದ. ಆಗ ತಮ್ಮನು "ಅಣ್ಣ, ನಾನು ಎಚ್ಚರವಾಗಿಯೇ ಇದ್ದೇನೆ, ನಿದ್ರೆಬರಲಿಲ್ಲ. ಅಣ್ಣನನ್ನೇ ಕುರಿತು ಚಿಂತಿಸುತ್ತಿದ್ದೆನು" ಎಂದು ನುಡಿದನು. (ಅಯೋ. ಸ. ೮೯) ಭರತ ಶತ್ರುಘ್ನಾದಿಗಳು ಗುಹನ ಸಹಾಯದಿಂದ ಗಂಗಾ ನದಿಯನ್ನು ದಾಟಿ ಪ್ರಯಾಗದಲ್ಲಿದ್ದ ಭರದ್ವಾಜಾಶ್ರಮವನ್ನು ಸೇರಿದರು.

ಭರದ್ವಾಜರ ಆತಿಥ್ಯವನ್ನು ಸ್ವೀಕರಿಸಿ ಅವರ ಅಪೇಕ್ಷೆಯಂತೆ ಆ ರಾತ್ರಿ ಆಶ್ರಮದಲ್ಲೇ ಉಳಿದರು. ದೇವೇಂದ್ರಭೋಗವೇರ್ಪಟ್ಟಿತು. ಭರತನು ಆಗ ಅಲ್ಲಿ ಆಳವಡಿಸಿದ್ದ ಸಿಂಹಾಸನದ ಮೇಲೆ ಕುಳಿತುಕೊಳ್ಳಲಿಲ್ಲ. ಚಿತ್ರಕೂಟಕ್ಕೆ ಪ್ರಯಾಣ ಬೆಳೆಸುವುದಕ್ಕೆ ಋಷಿಗಳ ಆಶೀರ್ವಾದಗಳನ್ನು ಬೇಡಿದರು. ಆಗ ಅವರು ರಾಜಮಾತೆಯರನ್ನು ಪರಿಚಯ ಮಾಡಿಕೊಡೆಂದರು. ಭರತನು ತಾಯಿಯನ್ನು ಪರಿಚಯ ಮಾಡಿಕೊಡುವಾಗ ಕಠಿಣೋಕ್ತಿಗಳಿಂದ ಕೈಕೇಯಿ ಯನ್ನು ತೋರಿಸಿದ. ಆಗ ಭರದ್ವಾಜರು "ಕೈಕೇಯಿಯು ಹಾಗೆ ನಡದು ಕೊಂಡದ್ದರಿಂದ ಸುರರ ಮತ್ತು ಲೋಕದ ಕಲ್ಯಾಣವಾಗುತ್ತದೆ" ಎಂದರು. ಶತ್ರುಘ್ನನು ತನ್ನ ಕುಶಲಮತಿಯ ಉಪ್ಪಗಲದಲ್ಲಿ ಓಡಾಡಿ ಮಲತಾಯಿಯ ಮೇಲಿದ್ದ [illegible] ವಾಯಿತು. ವಿಜಯದ ಮಾರ್ಗ

ಸಮೆಯುತ್ತಾ ಬಂತು, ಚಿತ್ರಕೂಟವನ್ನು ಸೇರಿದರು. ಶ್ರೀರಾಮನ ಆಶ್ರಮವನ್ನು ಹುಡುಕಲಾರಂಭಿಸಿದರು, ಭರತನ ಪ್ರತಿಯೊಂದು ನಡೆನುಡಿಗಳಿಂದ ಶತ್ರುಘ್ನನು ಪ್ರಭಾವಿತನಾದ. ತನ್ನ ಮತ್ತು ಅವನ ಸಂಬಂಧ ವಜ್ರದ ಬೆಸುಗೆಯಾಗುತ್ತಾ ಬಂತು. ಶ್ರೀರಾಮನ ಪಟ್ಟಾಭಿಷೇಕವೇ ಹೆಗ್ಗುರಿಯಾಯಿತು. ಭರದ್ವಾಜರ ವಚನಗಳನ್ನು ಕೇಳಿದ ಶ್ರೀರಾಮನಿಗೆ ಇಂದ್ರನು ಹೇಳಿದ್ದಿದು ಪ್ರಖರಗೊಂಡಿತು. ಅದರ ರೂಪುರೇಷೆ ಯಾವುದೆಂಬುದೇ ಅವನ ಚಿಂತನೆಯ ವಸ್ತುವಾಯಿತು. ಪ್ರಕೃತಿಯ ಸೌಂದರ್ಯಕ್ಕೆ ಬೆರಗಾಗದವರಾರು? ಚಿತ್ರಕೂಟದ ಸೊಬಗನ್ನು ವರ್ಣಿಸಿ ಶತ್ರುಘ್ನನ ಉದ್ವೇಗವನ್ನು ಶಮನ ಮಾಡುತ್ತ ಶ್ರೀರಾಮನ ಪರ್ಣಕುಟೀರವನ್ನು ಕಂಡನು. ಭರತ ಶತ್ರುಘ್ನರ ಸಂವೇದನಾಶೀಲತೆಯು ಪರಸ್ಪರ ಸ್ಪರ್ಧೆಹೂಡಿತು. ರಘುವೀರನು ಮಾತನಾಡಲಾರದೆ ಅವರಿಬ್ಬರನ್ನೂ ಆಲಂಗಿಸಿಕೊಂಡು ಅವರ ಭ್ರಾತೃವಾತ್ಸಲ್ಯವನ್ನು ಕಂಡು ಕ್ಷಣಕಾಲ ಮೂಕನಾಗಿ ಹರ್ಷಾಶ್ರುಗಳನ್ನು ಸುರಿಸಿದನು.

ಭರತ ಶತ್ರುಘ್ನರು ರಾಜ್ಯಾಡಳಿತದಲ್ಲಿ ನಿರತರಾಗಿರುವರೆಂದೂ, ಬಹಳ ಕಾಲ ರಾಜಗೃಹದಲ್ಲೇ ವಾಸಮಾಡುತ್ತಿದ್ದುದರಿಂದ ಪ್ರಜಾಪ್ರಭುತ್ವ ಪದ್ಧತಿಯ ಬಗ್ಗೆ ಶ್ರೀರಾಮನು ದೀರ್ಘವಾಗಿ ಬೋಧಿಸಿದ. ಶತ್ರುಘ್ನನಿಗೆ ಲೋಕ ವ್ಯವಹಾರದ ದಿಗಂತದರ್ಶನವಾಯಿತು. ಶಾಂತಚಿತ್ತವು ಪ್ರತಿಷ್ಠಿತವಾಗಿತ್ತು. ಮಹಾರಾಜನ ಮರಣವಾರ್ತೆಯನ್ನು ತಿಳಿದನಂತರ ರಾಮಲಕ್ಷ್ಮಣರ ಶೋಕದ ಕಡಲೂ ಭರತ ಶತ್ರುಘ್ನರ ಸಂಕಟದ ಕಡಲೂ ಢಕ್ಕಾಢಿಕ್ಕಿಯಲ್ಲಿ ತೊಡಗಿದುವು. ಪ್ರಕೃತಿಯ ಸೊಬಗೂ ಆ ಶೋಕಾನಲದಿಂದ ಬಾಡಿಹೋಯಿತು. ನಾಲ್ವರೂ ಕೂಡಿ ಪಿತೃತರ್ಪಣವನ್ನು ಬಿಟ್ಟರು. ಮೂವರು ಸಹೋದರಿಯರ ಮೂವರು ಅತ್ತೆಯಂದಿರ ಪರಸ್ಪರ ಸಂಮಿಳನ ಮತ್ತು ಅದರಿಂದ ಪಸರಿಸಿದ ಸಂವೇದನೆಯನ್ನು ಬಣ್ಣಿಸುವರಾರು ? ? ಸುರರೂ ಆಕಾಶದಲ್ಲಿ ನೆರೆದಿದ್ದರು. ಭ್ರಾತೃವಾತ್ಸಲ್ಯವೇ ರೂಪುತಾಳಿದಂತಿತ್ತು. ಶತ್ರುಘ್ನ ಲಕ್ಷ್ಮಣ ಸುಮಿತ್ರೆಯರ ಆಲಿಂಗನೋತ್ಸವ ಕಗ್ಗತ್ತಲೆಯಲ್ಲಿ–ಮಣಿದೀಪ ಮೆರೆದು ಮಾಯವಾದಂತಾಯಿತು.

ಭರತನು ಶ್ರೀರಾಮನನ್ನು ಪಟ್ಟಾಭಿಷಿಕ್ತನಾಗೆಂದು ಪ್ರಾರ್ಥಿಸಿದ.

ಹಲವು ಬಗೆಯಲ್ಲಿ ಬೇಡಿದ. ಸತ್ಯಾಗ್ರಹವನ್ನು ಹೂಡಿದ. ಅವನ ತರ್ಕವೆಲ್ಲಾ ವ್ಯರ್ಥವಾಯಿತು. ಶತ್ರುಘ್ನನು ಮಹಾಪ್ರೇಕ್ಷಕನಂತೆ ನಿಂತಿದ್ದರೂ ಭರತನ ನಡೆನುಡಿಗಳಲ್ಲಿ ಐಕ್ಯವಾದಂತಿದ್ದನು. ಪುರಜನರ ಪ್ರಾರ್ಥನೆಯೂ ವಿಫಲ ವಾಯಿತು. ಜಾಬಾಲಿಯ ಚಾರ್ವಾಕವಾದವು ನಿಂದಾಸ್ಪದವಾದದ್ದೆಂದು ಸೀತಾಪತಿ ಸಮರ್ಥಿಸಿದ. ವಸಿಷ್ಠರೂ ವಂಶದ ಪದ್ಧತಿಯಂತೆ ಅಯೋಧ್ಯೆಗೆ ಬಂದಾದರೂ ಸರಿಯೇ ಅಥವಾ ಇಲ್ಲೇ ಆದರೂ ಸರಿಯೆ ಪಟ್ಟಾಭಿಷಿಕ್ತನಾ ಗೆಂದು ವಾದಿಸಿದರು. ಎಲ್ಲವೂ ವ್ಯರ್ಥವಾಯಿತು. ಭರತನು ಶತ್ರುವಾಗಿ ಬರು ತ್ತಿದ್ದಾನೆಂದು ಶ್ರೀರಾಮನಿಗೆ ರಾಮಾನುಜನು ಹೇಳಿದಾಗ ಸೀತಾಪತಿ ಆಡಿದ್ದ ವಚನಗಳನ್ನು ಭರತ ಶತ್ರುಘ್ನರಿಗೆ ತಿಳಿಸಿಕೊಟ್ಟನು ಸೌಮಿತ್ರಿ. ತಮ್ಮನ ಇಂಗಿ ತವನ್ನರಿತು ಸೀತಾಪತಿಯು ಮತ್ತೆ ಹೇಳಿದನು. "ಲಕ್ಷ್ಮಣ, ಆಣೆಮಾಡಿ ಹೇಳುತ್ತೇನೆ, ಕೇಳು. ಧರ್ಮಾರ್ಥಕಾಮಗಳನ್ನಾಗಲಿ, ಈ ಪೃಥ್ವಿಯನ್ನಾಗಲಿ ನಿಮಗೋಸ್ಕರವೇ ನಾನು ಬಯಸುತ್ತೇನೆ. ಆಯುಧವನ್ನು ಮುಟ್ಟಿ ಸತ್ಯ ಮಾಡಿ ಹೇಳುತ್ತೇನೆ, ತಮ್ಮಂದಿರ ಜೊತೆಗೂಡಿ ಇರಬೇಕೆಂದೂ ಅವರಿಗೆ ಸುಖ ವಾಗಬೇಕೆಂದೂ, ನಾನು ರಾಜ್ಯವನ್ನು ಬಯಸುವೇನೇ ಹೊರತು ನನಗೋಸ್ಕ ರವಲ್ಲ. ಭರತನನ್ನೂ ಬಿಟ್ಟು ನಿಮಗಿಲ್ಲದ ಸುಖ ನನಗೆ ಬರುವುದಾದರೆ, ಅದನ್ನು ಬೆಂಕಿಯಲ್ಲಿ ಸುಡಬೇಕು."(ಅಯೋ.ಸ. ೯೭). ಶತ್ರುಘ್ನನ ಎದೆ ಝಲ್ಲೆಂದಿತು. ಶ್ರೀರಾಮನಸಹೋದರತ್ವ ಭರತಾನುಜನನ್ನು ಮೂಕನನ್ನಾಗಿ ಮಾಡಿಬಿಟ್ಟಿತು. ಅದರ ಬಂಧನ ಮತ್ತಷ್ಟು ಬಿಗಿಯಾಯಿತು. ಕೌಸಲ್ಯೆ ನದಿಯ ದಡದಿಂದ ರಾಮಾಶ್ರಮಕ್ಕೆ ಬರುವಾಗ ಸುಮಿತ್ರೆಗೆ ಲಕ್ಷ್ಮಣನು ರಾಮಸೇವೆ ಹೇಗ್ಹೇಗೆ ಮಾಡುತ್ತಿದ್ದಾನೆಂದು ವಿವರಿಸಿದ್ದುದೂ ಶತ್ರುಘ್ನನ ಕಿವಿಗೆಬಿದ್ದು ತನ್ನ ಸೇವೆ ಯನ್ನರಿತ ಸಂದರ್ಭದ ಪ್ರಭಾವವು ಲಕ್ಷ್ಮಣಾನುಜನನ್ನು ಮುಗ್ಧನನ್ನಾಗಿ ಮಾಡಿತು. ಭರತನಿಗೆ ಶ್ರೀರಾಮನು ಬೋಧಿಸಿದ. "ಹೇ ವೀರಾಗ್ರಣಿ, ನನ್ನ ತಂದೆಯನ್ನು ಸತ್ಯಸಂಧನನ್ನಾಗಿಯೇ ಉಳಿಸಬೇಕೆಂದು ಸಂಕಲ್ಪಿಸಿದ್ದೇನೆ, ಕುಶಾ ಗ್ರಬುದ್ಧಿಯುಳ್ಳ ಶತ್ರುಘ್ನನು ನಿನಗೆ ಸಹಾಯಕನಾಗಿರಲಿ. ಈ ಸುಮಿತ್ರಾ ತನಯನು ನನಗೆ ಆಪ್ತಮಿತ್ರನಾಗಿರುವನು. ಭರತ, ದಶರಥ ನರೇಂದ್ರನಿಗೆ ನಾವು ನಾಲ್ವರು ಮಕ್ಕಳಿದ್ದೇವೆ. ನಾವೆಲ್ಲರೂ ಸೇರಿ ನಮ್ಮ ತಂದೆಯನ್ನು ಸತ್ಯ ಸಂಧನೆಂದು ಸ್ಥಾಪಿಸೋಣ"ಎಂದನು. (ಅಯೋ. ಸ. ೧೧೭) ಶತ್ರುಘ್ನನು

ಇದು ಪರಮವೇದವಾಕ್ಯ, ರಾಜಾಜ್ಞೆ, ಹಿರಿಯಣ್ಣನ ಅನುರಾಗ ಬಂಧನ, ಸುರಕಾರ್ಯದ ದರ್ಶನ ಕಾಲಾನುಕ್ರಮದಲ್ಲಿ ವಿಕಸಿತವಾಗುತ್ತದೆ, ತನ್ನ ಬದುಕಿನ ಗುರಿ ಸುಸ್ಪಷ್ಟವಾಗುತ್ತದೆ, ಇನ್ನು ಕವಲೊಡೆದ ಮಾರ್ಗವೇ ಇಲ್ಲವೆಂದರಿತ.

ವಸಿಷ್ಠರ ಸಂಜ್ಞೆಯಂತೆ ಭರತನು ಸುವರ್ಣ ಪಾದುಕೆಗಳನ್ನು ಶ್ರೀರಾಮನ ಪಾದಗಳಮುಂದಿಟ್ಟ. ರಘುತಿಲಕನು ಅವುಗಳನ್ನು ಮೆಟ್ಟಿ, ಸೂಕ್ಷ್ಮಜೀವಿಯಾಗಿ ಅವುಗಳಲ್ಲಿ ಪ್ರವೇಶಿಸಿ ತಮ್ಮನಿಗೆ ಕೊಟ್ಟು ಅವನನ್ನೂ ಶತ್ರುಘ್ನನನ್ನೂ ವಾತ್ಸಲ್ಯದಿಂದ ಅಪ್ಪಿಕೊಂಡನು. ಅವರೆದೆಯ ಮೇಲೆ ರಾಮ ಭಕ್ತಿಯ ಶಾಶ್ವತ ಮುದ್ರೆಯನ್ನು ಒತ್ತಿದ. ಕೈಕೇಯಿ ತನಯನು ಕೌಸಲ್ಯಾಸು ತನಿಗೆ ಕಡಿಮೆಯವನೆ? ''ಅಣ್ಣಾ, ಹದಿನಾಲ್ಕುವರ್ಷಗಳು ತುಂಬಿದ ಮರುಗನೆ ದಿವಸ ಅಯೋಧ್ಯೆಯಲ್ಲಿ ನಿನ್ನ ದರ್ಶನ ಕೊಡದಿದ್ದರೆ ಖಂಡಿತವಾಗಿ ಅಗ್ನಿ ಪ್ರವೇಶ ಮಾಡುತ್ತೇನೆ'' ಎಂದನು. ಇದಕ್ಕೆ ಮುಂಚೆ ಶ್ರೀರಾಮನು ಧರ್ಮ ಸಂಕಟಕ್ಕೆ ಸಿಕ್ಕಿಕೊಂಡಿದ್ದದ್ದನ್ನು ಗಗನದಲ್ಲಿ ನೆರೆದಿದ್ದ ಸುರರು ಅರಿತು ''ಭರತ, ರಾಮಕಾರ್ಯಕ್ಕೆ ಅಡ್ಡಿಬರಬೇಡ. ಅವನಾಣತಿಯನ್ನು ಪಾಲಿಸು'' ಎಂದು ಹೇಳಿದ್ದು ಉಭಯತ್ರರಿಗೂ ಆಶ್ಚರ್ಯ ತಿ[illegible]ನವಾಯಿತು. ಭರತಾನುಜನು ಅದನ್ನು ಕೇಳಿ ದೇವಕಾರ್ಯವು ಶೀಘ್ರವಾಗಿ ನೆರವೇರಲಿ. ನಾನೂ ಅದರಲ್ಲಿ ಭಾಗಿಯಾಗುವ ಅವಕಾಶ ಸಿಕ್ಕಲೆಂದು ಮನದೊಳಗೆ ಸುರರನ್ನು ಪ್ರಾರ್ಥಿಸಿದ. ಭರತನ ಪ್ರತಿಜ್ಞೆಯನ್ನು ಕೇಳಿ ಜಂಗಮ ಅಯೋಧ್ಯೆ ಮತ್ತಷ್ಟು ಅಲುಗಾಡಿ ಹೋಯಿತು. ಆದರೆ ಭರತ ಶತ್ರುಘ್ನರು ಅನುಭವಿಸಿದ್ದೇ ಬೇರೆ. ತನ್ನ ಇಷ್ಟವು ನೆರವೇರಿತೆಂದು ಭರತನ ಮುಖವು ಅರಳಿತು. ಅವನು ಮಾತೆಯರೆಲ್ಲ ರಿಗೂ ಅಭಿವಾದನೆ ಮಾಡಿ ಶತ್ರುಘ್ನನೊಡನೆ ರಥವನ್ನೇರಿದನು. ಭರತ ಶತ್ರುಘ್ನರಿಬ್ಬರೂ ಸಂತೃಪ್ತಿಯಿಂದ ರಥವನ್ನೇರಿ ತಡಮಾಡದೆ ಮಂತ್ರಿ ಪುರೋಹಿತರುಗಳನ್ನು ಕರೆದುಕೊಂಡು ಹೊರಟರು. ನಂದಿಗ್ರಾಮವು ಅವರ ಗುರಿಯಾಯಿತು. (ಅಯೋ. ಸ. ೧೧೫) ಭರತನ ಶಿರದ ಮೇಲಿದ್ದ ಪವಿತ್ರ ಪಾದುಕೆಗಳು ತನ್ನ ತಲೆಯನ್ನೂ ಪವಿತ್ರಗೊಳಿಸಲೆಂಬುದೇ ಲಕ್ಷ್ಮಣಾನುಜನ ಪ್ರಯಾಣಕಾಲದ ಚಿಂತನಾವಸ್ತುವಾಗಿ ಪರಿಣಮಿಸಿತ್ತು. ಸೀತಾಮಾತೆಯ ನಯನಗಳಿಂದ ಉರುಳುತ್ತಿದ್ದ ಹನಿಗಳನ್ನು ಗಮನಿಸಿದ ಸುಮಿತ್ರಾತನಯನ

ಅಂತರ್ಯದಲ್ಲಿ ಆ ದೃಶ್ಯವು ಸ್ಥಿರವಾಗಿ ಉಳಿಯಿತು. ನಂದಿಗ್ರಾಮದಲ್ಲಿ ಶ್ರೀರಾಮನ ಪಾದುಕೆಗಳ ಪಟ್ಟಾಭಿಷೇಕವು ಸಾಂಗವಾಗಿ ನೆರವೇರಿತು. ಅರಮನೆಯ ವ್ಯವಸ್ಥೆಯನ್ನು ವಸಿಷ್ಠರ ತಮ್ಮನ ಸಲಹೆಗೆ ಅನುಗುಣವಾಗಿ ಮಾಡಿದನು.

## ವ್ಯಾಧಿಗ್ರಸ್ತ ಭರತನಿಗೆ ಶತ್ರುಘ್ನನೇ ವೈದ್ಯ

ಭರದ್ವಾಜರಿಗೆ ದಶರಥನ ರಾಣಿಯರನ್ನು ಪರಿಚಯ ಮಾಡಿಕೊಡುವಾಗ ಭರತ ಸುಮಿತ್ರೆಯ ಬಗೆಗೆ ಹೀಗೆನ್ನುತ್ತಾನೆ: "ಅಶ್ವಿನಿ ದೇವತೆಗಳಂತೆ ರೂಪಸಂಪನ್ನರೂ, ವೀರರೂ, ಸತ್ಯಸಂಧರೂ ಆದ ಲಕ್ಷ್ಮಣ ಶತ್ರುಘ್ನರಿಬ್ಬರೂ ಈಕೆಯ ಪುತ್ರರು." (ಅಯೋ.ಸ, ೯೨. ಶ್ಲೋ. ೨೨–೨೪) ಅಶ್ವಿನಿ ಕುಮಾರರು ದೇವವೈದ್ಯರು. ಸೂರ್ಯಪತ್ನಿಯಾದ ಸಂಜ್ಞಾದೇವಿಯು ಕುದುರೆಯ ರೂಪಧರಿಸಿದ್ದಾಗ ಸೂರ್ಯನಿಂದ ಹುಟ್ಟಿದ ಅವಳಿ ಮಕ್ಕಳು. ಮುಪ್ಪಿನ ಚ್ಯವನ ಋಷಿಗೆ ತಾರುಣ್ಯವನ್ನು ಕರುಣಿಸಿದವರು. ದೇವತೆಗಳಲ್ಲಿ ಶೂದ್ರ ಜಾತಿಗೆ ಸೇರಿದವರು (ಪುರಾಣನಾಮ ತಿಲಕ) ಭರತನು ಶತ್ರುಘ್ನನನ್ನು ಅಶ್ವಿನಿ ದೇವನೆಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ. ತನ್ನ ತಾಯಿಯಿಂದಾಗಿ ಶ್ರೀ ಸೀತಾರಾಮಲಕ್ಷ್ಮಣರು ಕ್ರೂರರಾಕ್ಷಸರ ನಡುವೆ ವನವಾಸ ಮಾಡಬೇಕಾಯಿತಲ್ಲ ಎಂದು ಚಿಂತಾಮಗ್ನನಾಗುತ್ತಾನೆ, ಮನೋರೋಗಪೀಡಿತನಾಗುತ್ತಾನೆ. ಅದನ್ನು ಔಷಧಿಯಿಂದ ಗುಣಪಡಿಸತಕ್ಕವನು ಶತ್ರುಘ್ನನೆಂದು ನಂಬಿದ್ದಾನೆ. ಶ್ರೀರಾಮನು ವಿರಹ ಬಾಧೆಯಿಂದ ಭ್ರಮಣೆಗೊಂಡಾಗ ಲಕ್ಷ್ಮಣನೂ ಅದೇ ಕೆಲಸ ಮಾಡುತ್ತಾನಲ್ಲವೆ ?

ಚಿತ್ರಕೂಟದ ಭ್ರಾತೃಮಿಲನದಲ್ಲಿ ನಡೆದದ್ದೇನು ? ಶ್ರೀರಾಮನು 'ಭರತ ಶತ್ರುಘ್ನರಿಗೆ ಲೋಕಾನುಭವವಿಲ್ಲ, ರಾಜ್ಯಭಾರಮಾಡುವ ರಾಜನೀತಿಯಲ್ಲಿ ಅಜ್ಞರು, ಅವರು ದೀರ್ಘಕಾಲ ರಾಜಗೃಹದಲ್ಲಿದ್ದುಕೊಂಡು ಸಂಸಾರ (ಪ್ರಜೆಗಳಿಂದ ಕೂಡಿದ) ಸಮರವನ್ನು ಎದುರಿಸಿದವರಲ್ಲ, ಅಂಥವರಿಗೆ ಕೋಸಲರಾಜ್ಯ ಲಭಿಸಿದೆ, ದುರಾಡಳಿತದಿಂದ ಇಕ್ಷ್ವಾಕು ವಂಶಕ್ಕೆ ಅಪಕೀರ್ತಿಯನ್ನು ತರುವರೋ'ಎಂಬ ಭಯ ಶ್ರೀರಾಮನಿಗೆ ಆವರಿಸಿತ್ತು. ಪಿತನ ಮರಣ ಸಮಾ

ಚಾರವನ್ನು ಕೇಳಿಯೂ ಕೇಳದವನಂತೆ ರಾಜನೀತಿಯನ್ನು ಬೋಧಿಸುತ್ತಾನೆ. ಕೊನೆಯಲ್ಲಿ ಹೀಗೆನ್ನುತ್ತಾನೆ : "ಭರತ, ಇದುವರೆಗೆ ನಾನು ಹೇಳಿದಂತೆ ನಿನ್ನ ಬುದ್ಧಿ ಪ್ರವರ್ತಿಸುವುದೆ ? ಈ ಬಗೆಯ ಬುದ್ಧಿ ಆಯುಷ್ಕರ, ಯಶಸ್ಕರ. ಇದರಿಂದ ಧರ್ಮಾರ್ಥಕಾಮಗಳು ಸಿದ್ಧಿಸುತ್ತವೆ. (ಅಯೋ.ಸ. ೧೦೦ ಶ್ಲೋ ೭೩). ಇದು ಶ್ರೀರಾಮನ ಆದೇಶ. ಭರತನು ಶತ್ರುಘ್ನನೊಡಗೂಡಿ ಕೋಸಲ ದೇಶವನ್ನು ಕಾಪಾಡಿ ಶಾಂತಿಯನ್ನು ಸ್ಥಾಪಿಸಿ ರಕ್ಷಿಸಬೇಕಾಗಿದೆ.

ಪಾದುಕಾ ಪಟ್ಟಾಭಿಷೇಕಕ್ಕೆ ಪೂರ್ವಭಾವಿಯಾಗಿ ಅರಮನೆಯ ಒಳಾಡಳಿತವನ್ನು ಶತ್ರುಘ್ನ ವಸಿಷ್ಠರ, ಕೌಸಲ್ಯೆ ಸುಮಿತ್ರೆಯರ ಸಲಹೆಯಂತೆ ಊರ್ಮಿಳಾದೇವಿಗೆ ವಹಿಸಿಕೊಟ್ಟ. ಅವಳಿಗೆ ಅತಿ ಹೊಣೆಗಾರಿಕೆಯ ಹುದ್ದೆ. ನಂದಿಗ್ರಾಮದಲ್ಲಿ ಶ್ರೀರಾಮನು ಮೂಲದೇವರಾಗಿ ಪ್ರತಿಷ್ಠಿತನಾದ. ಭರತನು ಶ್ರೀರಾಮನ ರಾಜನೀತಿಗಳೇನೆಂಬುದನ್ನು ಸ್ಮರಿಸುತ್ತಿದ್ದ; ಅದರಲ್ಲಿ ತಡವರಿಸುತ್ತಿದ್ದ. ಆಗ ಕುಶಲಮತಿಯಾದ ಶತ್ರುಘ್ನನು ಶ್ರೀರಾಮನ ವಚನಗಳನ್ನು ಚಾಚೂತಪ್ಪದೆ ಹೇಳತೊಡಗಿದ. ಸ್ವಲ್ಪಹೊತ್ತು ಚಿಂತನೆಮಾಡಿದರು. ಆಮೇಲೆ ಶತ್ರುಘ್ನನು ಲಕ್ಷ್ಮಣಾಗ್ರಜನ ಆದೇಶವಚನಗಳನ್ನು ಒತ್ತೊತ್ತಿ ಉಚ್ಚರಿಸಿದ. "ತಮ್ಮ, ನಾವುಗಳು ರಾಜಗೃಹದಲ್ಲಿ ದೀರ್ಘಕಾಲ ಕಳೆದದ್ದರಿಂದ ನಮ್ಮ ರಾಜನೀತಿಯ ಅಜ್ಞಾನ ಬೆಳಕಿಗೆ ಬಂದಿದೆ. ಆದ್ದರಿಂದ ಧೈರ್ಯಗೆಡಬೇಕಾಗಿಲ್ಲ. ಅನುಭವಿಗಳಾದ ಮಂತ್ರಿಗಳೂ, ಪುರೋಹಿತರೂ, ಭೃತ್ಯರೂ ಇದ್ದಾರೆ. ಆದರೂ ರಾಜನಿಗೆ ಮುಳ್ಳು ಕಿರೀಟವೇ ? ಸಹಸ್ರಾಕ್ಷನಾಗಿರಬೇಕಾಗುತ್ತದೆ. ಈಗ ನಾವುಗಳು ಕ್ರಿಯಾಶೀಲರಾಗಬೇಕಾದರೆ ಅಣ್ಣನ ಆದೇಶವನ್ನು ಅಕ್ಷರಶಃ ಪಾಲಿಸಬೇಕು. ಏನು ಮಾಡೋಣ"ಎಂದ.

"ಅಣ್ಣ, ರಾಜ್ಯಾಡಳಿತದಲ್ಲಿ ಹಲವು ಆಡಳಿತ ಶಾಖೆಗಳಿವೆ. ಮುಖ್ಯವಾಗಿ ಸೇನೆ, ರಾಜ್ಯಾದಾಯ, ಪ್ರಜಾರಕ್ಷಣೆ, ಪೌರಾಡಳಿತ, ಕೃಷಿ, ವಾಣಿಜ್ಯ ಇತ್ಯಾದಿ ಶಾಖೆಗಳು"ಎಂದ ಸೌಮಿತ್ರಿ. "ಅಹುದು, ನನ್ನ ವ್ಯಾಧಿ ನಿನಗೆ ಗೊತ್ತಿದೆ. ನನ್ನ ಬಲಾಬಲಗಳೂ ಗೊತ್ತಿವೆ. ಆದ್ದರಿಂದ ನೀನು ಯಾವಾವ ಆಡಳಿತಶಾಖೆಗಳನ್ನು ವಹಿಸಿಕೊಳ್ಳುವೆಯೊ" ಹೇಳೆಂದ. "ಶ್ರೀರಾಮನ ಸ್ಮರಣೆಗೆ ನಿನಗೆ ತಕ್ಕಷ್ಟು ಅವಕಾಶವನ್ನು ಕಲ್ಪಿಸಿಕೊಡುವೆ. ಪುರೋಹಿತರಿಂದ

ಹೋಮಕಾರ್ಯಗಳು, ಬ್ರಾಹ್ಮಣರಿಂದ ರಾಜನ ಶ್ರೇಯಃ ಪ್ರಾರ್ಥನೆಗಳು ಹಿಂದಿಗಿಂತ ಇಂದು ಹೆಚ್ಚಾಗಿ ನಡೆಯಬೇಕಾಗಿದೆ. ಧನುರ್ವಿದ್ಯಾಗುರಗಳು ಸುಪ್ರೀತರಾಗಿರಬೇಕು. ವೃದ್ಧರ, ವೈದ್ಯರ, ವಿಬುಧರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು. ನಮ್ಮ ಮಂತ್ರಾಲೋಚನೆಯು ಕೃತಿಗಿಳಿಯುವ ಮುನ್ನವೇ ಬಹಿರಂಗವಾಗದಂತೆ ಎಚ್ಚರಿಕೆಯಿಂದಿರಬೇಕಲ್ಲವೆ ? ಲಂಚಕೋರ ಅಧಿಕಾರಿಗಳನ್ನು ಅಪ್ರಾಮಾಣಿಕ ಸರ್ಕಾರಿಸೇವಕರನ್ನು ಗುರ್ತಿಸಿ ಶಿಕ್ಷಿಸಬೇಕಾದ್ದಿದೆ. ಭೃತ್ಯರಸೇವೆ ಸೇನಾಧಿಕಾರಿಗಳ ಶೌರ್ಯಪ್ರಕಾಶನಗಳಿಗೆ ತಕ್ಕ ಮಾಸಾಶನಗಳನ್ನೂ ಸಂದರ್ಭಾನುಸಾರ ಪಾರಿತೋಷಕಗಳನ್ನೂ ಕೊಟ್ಟು ಅವರುಗಳ ಪ್ರೀತಿ, ನಿಷ್ಠೆಯನ್ನು ಗಳಿಸಬೇಕಾದದ್ದು. ನಾಸ್ತಿಕ ಬ್ರಾಹ್ಮಣರಿಂದ ಪ್ರಜಾಕ್ಷೋಭೆಯಾಗುವುದನ್ನು ಖಂಡಿಸಬೇಕು. ಅಯೋಧ್ಯಾನಗರದ ಕೋಟೆಕೊತ್ತಳ ಪೌರರ ಕ್ಷೇಮವೂ ಹೊಣೆಗಾರಿಕೆಯದೆ. ಲೋಹಗಳ ಗಣಿ, ಕೃಷಿ, ಕೆರೆ ಕಟ್ಟೆ ಕಾಲುವೆಗಳು ರಾಜ್ಯದ ಭಂಡಾರವನ್ನು ವೃದ್ಧಿಗೊಳಿಸುತ್ತವೆಯಲ್ಲವೆ ? ವಾಣಿಜ್ಯದಿಂದ ದೇಶದ ಸಂಪತ್ತು ಬೆಳೆಯುತ್ತದೆ. ವಣಿಕರು ಶೋಷಣೆಯ ಮಾರ್ಗವನ್ನನುಸರಿಸದಂತೆ ಗಮನಹರಿಸಬೇಕು. ಆನೆಗಳ ಕಾಡನ್ನು ನೋಡಿಕೊಳ್ಳಬೇಕು. ಆದಾಯವನ್ನು ಹೆಚ್ಚಿಸಬೇಕು, ವ್ಯಯವನ್ನು ಕಡಿಮೆ ಮಾಡುವ ನೀತಿಯನ್ನು ಅನುಸರಿಸಬೇಕು. ಎಲ್ಲಕ್ಕೂ ಹಿರಿದಾಗಿ ಗುಪ್ತಚಾರರ ಪಡೆ ಪ್ರಾಮಾಣಿಕರಿಂದಲೂ ಚಾಣಾಕ್ಷರಿಂದಲೂ ಕೂಡಿರಬೇಕು. ಈ ಆಡಳಿತ ಶಾಖೆಗಳನ್ನೆಲ್ಲಾ ನಾನು ನೋಡಿಕೊಳ್ಳಬಲ್ಲೆ"ಎಂದ. "ಶತ್ರುಘ್ನ, ಒಪ್ಪಿದೆ. ಮಾತೆಯರಿಗೆ ಗತಿಸಿದ ಮಹಾರಾಜರು ಬಿಟ್ಟಿರುವ ಮಾನ್ಯ ಆಸ್ತಿಗಳ ಮೇಲ್ವಿಚಾರಣೆ ಮತ್ತು ಅವುಗಳಿಂದ ಬರುವ ಆದಾಯವನ್ನು ಅವರವರಿಗೆ ಸಲ್ಲಿಸುವುದು ನನ್ನಿಂದಾಗದು. ಅದನ್ನೂ ನೀನೆ ವಹಿಸಿಕೊ". "ಆಗಬಹುದು." "ನಿನಗುಳಿದಿರುವುದೆಂದರೆ ವಿದೇಶಾಂಗ ನೀತಿ, ನ್ಯಾಯಾಂಗ, ದೇಶದಮೇಲೆ ದುರಾಕ್ರಮಣ ನಡೆದಾಗ ಪ್ರಧಾನ ದಂಡಾಧಿಕಾರಿಯಾಗುವುದು," "ಇಷ್ಟೆ ತಾನೆ" "ತುರ್ತು ಪರಿಸ್ಥಿತಿಯೊದಗಿದಾಗ ಸರ್ವಾಧಿಕಾರ", "ಆಗಬಹುದೆಂದ" ಭರತಾನುಜ.

ಭರತನ ತ್ಯಾಗ, ತಾಪಸೀವೃತ್ತಿ, ಹೃದಯಸ್ಪರ್ಶಿಯಾಗಿತ್ತು, ಪ್ರಭಾವಯುಕ್ತವಾಗಿತ್ತು. ಅಮಾತ್ಯಾದಿಗಳೂ ಕೂಡ ಕಾಷಾಯ ವಸ್ತ್ರಗಳನ್ನು ಧರಿಸಿ ವ್ರತನಿಷ್ಠರಾಗಿದ್ದರು. ಆದ್ದು ಶತ್ರುಘ್ನನು ಈ ನಿಯಮಗಳಿಗೆ ಹೊರತಾಗಿ

ಭೋಗಜೀವಿಯಾಗಿರಬಲ್ಲನೆ; ಅದು ಯುಕ್ತವೆ? ಮಾಂಡವಿ ಶ್ರುತಕೀರ್ತಿ ಯರೂ ನಾರುಡೆಯನ್ನುಟ್ಟು ತಾಪಸೀಜೀವನವನ್ನು ನಡೆಸುತ್ತಿದ್ದರು. ಗಡ್ಡೆ ಗೆಣಸು ಫಲಮೂಲಗಳೇ ನಂದಿಗ್ರಾಮದ ವನವಾಸಿಗಳ ಆಹಾರವಾಗಿತ್ತು. ಇಷ್ಟೆಲ್ಲಾ ಸ್ವಯಿಚ್ಛೆಯಿಂದ ಆದದ್ದಾದರೂ ಕೆಲವು ಕ್ಷಣಕಾಲ ಮಾಯೆ ಪೀಡಿ ಸುತ್ತಿದ್ದಳು. ನನಗೂ ನನ್ನ ಪತ್ನಿಗೂ ಈ ಅವಸ್ಥೆ ಏಕೆ? ನನಗೇನು ಯುವ ರಾಜ ಪದವಿಯಾದರೂ ಸಿಕ್ಕುವುದೆ? ಹೋಗಲಿ, ಶ್ರೀರಾಮನನ್ನೇ ಅನು ವರ್ತಿಸಿಹೋಗಿರುವ ಅಣ್ಣ, ಲಕ್ಷ್ಮಣನಿಗಾದರೂ ಯುವರಾಜ ಪದವಿ ಸಿಕ್ಕು ವುದೆ? ಅದು ಭರತನಿಗೇ ಸರಿ. ಅವನು ಪದವಿಗೋಸ್ಕರ ಈ ರೀತಿಯ ತಪೋ ನಿರತನಾಗಿರುವುದೂ ಯುಕ್ತವೆ? ಈ ಕವಲು ಚಿಂತನೆಗಳಿಗೆ ಅಮ್ಮನ ಕುಠಾರ ನೀತಿವಾಕ್ಯಗಳು ಅವಕಾಶಕೊಡುವುದಿಲ್ಲವಲ್ಲ? ಏನೇ ಆದರೂ ಮಾತೆಯೇ ದೇವತೆಯಲ್ಲವೆ? ಕ್ಷಣಭಂಗುರದ ಈ ಆಲೋಚನೆಗಳು ಸಿಡಿದು ಹೋದಾಗ ಚಕಿತನಾಗಿ ತನ್ನಷ್ಟಕ್ಕೆ ತಾನೇ ನಗುತ್ತಿದ್ದ.

ಮೂವರು ಮಾತೆಯರೂ ಇನ್ನೂ ಕೆಲವು ಮಾತೆಯರು ಸಮಯಾನು ಸಾರ ಸಂಭಾಷಣೆಗಳನ್ನು ನಡೆಸುತ್ತಿದ್ದರು. ಪ್ರಾರಂಭದಲ್ಲಿ ಕೈಕಾದೇವಿಯು ಪಟ್ಟಾಭಿಷಿಕ್ತನಾಗೆಂದೇ ಮಗನಿಗೆ ಬೋಧಿಸುತ್ತಿದ್ದಳು. ಅವರ ವಾಕ್ಸರಣಿ ಯನ್ನು ತೀಕ್ಷ್ಣವಾಗಿ ಗಮನಿಸಿ ಅರ್ಥೈಸಿದರೆ ಅವಳು ಮಗನ ದೃಢತೆಯನ್ನು ಪರೀಕ್ಷಿಸಲು ಒಡ್ಡಿದ ಆಕರ್ಷಕ ಪ್ರಲೋಭನಗಳೆಂದು ಗೊತ್ತಾಗುತ್ತಿತ್ತು. ಸಮಯ ಸಿಕ್ಕಿದಾಗ ಅವನು 'ಇದು ಮಾತೆ ನಿನಗೊಡ್ಡಿದ ಪ್ರಲೋಭನ'ವೆಂದು ವಿವರಿಸುತ್ತಿದ್ದ. ಹೀಗೆ ಕೇಳಿದಂತೆಲ್ಲಾ ಕೈಕೇಯಿಯ ಬಗೆಗೆ ಭರತನ ತಿರ ಸ್ಕಾರ ಅಥವಾ ಉದಾಸೀನ ಮನೋಭಾವ ಕ್ಷೀಣವಾಗುತ್ತಾ ಬಂದಿತು. ಊರ್ಮಿಳಾದೇವಿ ಬಂದಾಗ ಭರತಾಶ್ರಮವನ್ನು ಒಂದು ಬಗೆಯ ಪ್ರಭೆ-ಆವರಿ ಸುತ್ತಿತ್ತು. ಶತ್ರುಘ್ನನು ಅತ್ತಿಗೆಯನ್ನು ಮಾತೆಯೆಂದೇ ತಿಳಿದು ನಡೆದುಕೊ ಳ್ಳುತ್ತಿದ್ದ. ಅರಮನೆವಾಸಿಗಳು ಹೋಗಿಬರುವುದಕ್ಕೂ, ಮಾಂಡವಿ ಶ್ರುತ ಕೀರ್ತಿ ಊರ್ಮಿಳೆಯರು ಸರಯೂನದಿಯಲ್ಲಿ ಸ್ನಾನ ಮಾಡುವುದಕ್ಕೂ, ಮನ ಸಾದರೆ ಜಲಕ್ರೀಡೆಯಾಡುವುದಕ್ಕೂ ಮತ್ತು ಪಾದುಕೆಗಳ ಪೂಜೆಗೋಸ್ಕರ ಹೂದೋಟದ ವ್ಯವಸ್ಥೆಯನ್ನೂ ಸಹ ಮಾಡಿಸಿದ್ದ, ಗುಹನ ಸಂಗಡ ವ್ಯವಹ ರಿಸಿ ಒಂದೆರಡು ದೋಣಿಗಳನ್ನೂ ಹತ್ತಾರೂ ಬೇಡಿತಿಯರನ್ನೂ ಕರೆಸಿ

ಸ್ತ್ರೀಯರ ಸ್ನಾನಸಂದರ್ಭದಲ್ಲಿ ಕಾವಲಿದ್ದು ಎಚ್ಚರಿಕೆಯಿಂದ ನೋಡಿಕೊಳ್ಳುವ ಏರ್ಪಾಡು ಮಾಡಿದ್ದ. ತನ್ನ ಆಡಳಿತಾಂಗಗಳ ಮೇಲ್ವಿಚಾರಣೆ ಬಹಳ ದಕ್ಷತೆಯಿಂದ ಕೂಡಿತ್ತು. ಅಣ್ಣನು ಬೋಧಿಸಿದ್ದದ್ದನ್ನು ಅನುಷ್ಠಾನಕ್ಕೆ ತರುತ್ತಿದ್ದನು. ''ತಮ್ಮ, ಶ್ರೀರಾಮನು ಈ ರಾಜ್ಯವನ್ನು ನ್ಯಾಸವಾಗಿಟ್ಟಿದ್ದಾನೆ ತಾನೆ ? ಅದರ ಆದಾಯ ಇಮ್ಮಡಿ ಮುಮ್ಮಡಿಯಾಗಬೇಕು. ಕೃಪಣತ್ವಕ್ಕೆಡೆಗೊಡದೆ ಪ್ರಜಾ ಕ್ಷೇಮಕ್ಕೆ ವ್ಯಯಮಾಡಬೇಕು. ಆಗಲೇ ನಾವು ಅಣ್ಣನ ಆದೇಶವನ್ನು ಪಾಲಿಸಿದಂತಾಗುತ್ತದೆ'' ಎಂದ ಭರತ. ಅದರಂತೆ ಶತ್ರುಘ್ನನು ಮಂತ್ರಿಗಳ ಸಲಹೆಗಳಿಗವಕಾಶಕೊಟ್ಟು, ಅನೇಕ ನೂತನ ವಿಧಾನಗಳನ್ನು ಕಲ್ಪಿಸಿ ರಾಜ್ಯಾದಾಯವು ವರ್ಷೇ ವರ್ಷೇ ಹಿಗ್ಗುವಂತೆ ಮಾಡಿದ್ದ. ನಾಸ್ತಿಕ ಬ್ರಾಹ್ಮಣರನ್ನೂ ಶೋಷಣೆಯ ವಣಿಕರನ್ನೂ ಹಿಡಿತದಲ್ಲಿಟ್ಟಿದ್ದ. ಬೇಹುಗಾರಿಕೆ ಪಡೆಯ ಕರ್ತವ್ಯಪರಿಪಾಲನೆಯಲ್ಲಿ ಆದ್ಯ ಗಮನವನ್ನಿಟ್ಟಿದ್ದ. ಉನ್ನತ ಭ್ರಷ್ಟಅಧಿಕಾರಿಗಳ ವ್ಯವಹಾರವನ್ನು ಅಣ್ಣನ ಗಮನಕ್ಕೆ ತಂದು ಶಿಕ್ಷೆಯನ್ನೂ ಸೂಚಿಸುತ್ತಿದ್ದ. ಮದ್ಯದ ಅಂಗಡಿಗಳಮೇಲೆ ಗಮನವಿಟ್ಟು ಅತಿ ಕುಡುಕರಿಗೆ ತಕ್ಕ ಶಿಕ್ಷೆಯನ್ನು ವಿಧಿಸುತ್ತಿದ್ದ. ಬಿಡುವಿಲ್ಲದೆ ಕಾರ್ಯೋನ್ಮುಖನಾಗಿದ್ದ ಭರತಾನುಜ. ಕುಟೀರಕ್ಕೆ ಬಂದಾಗ ಶ್ರುತಕೀರ್ತಿಯ ಯೋಗಕ್ಷೇಮವನ್ನೂ ವಿಚಾರಿಸಿಕೊಳ್ಳುತ್ತಿದ್ದ. ಆಗ ಕ್ಷಣಕಾಲ ಮಾಯೆ ಕಾಡಿಸುತ್ತಿತ್ತು. ಈ ತಾಪಸೀಜೀವನ ಏತಕ್ಕೋಸ್ಕರ, ಶ್ರುತಕೀರ್ತಿಗೇಕೆ ಈ ಸಂಯಮ ಬಂಧನ, ಅನನ್ಯನಿಷ್ಠೆ ? ಸ್ತ್ರೀಗೆ ಇರುವುದು ಸ್ವಾಭಾವಿಕವಾದ ಸಂತತಿಯನ್ನು ಪಡೆಯುವ ಹೆಬ್ಬಯಕೆ, ಇದನ್ನು ಸ್ಮರಿಸಿಕೊಂಡು ಎಷ್ಟುಮರುಗುವಳೋ, ಕೊರಗುವಳೋ ? ಛೀ ಈ ಚಿಂತನೆಗಳೆನ್ನ ಮತಿಯಲ್ಲಿ ಮೂಡಿಬರಬಹುದೆ ಎಂದು ಎಚ್ಚರಗೊಳ್ಳುತ್ತಿದ್ದ. ಪ್ರಜೆಗಳ ಹಿತಾರ್ಥವಾಗಿ ದುಷ್ಟಮೃಗಗಳ ಬೇಟೆಯಾಡಿ ಬರುತ್ತಿದ್ದ. ಕೆಲವು ವೇಳೆ ಪತ್ನೀ ಸಮೇತನಾಗಿ ಅವಳ ಬೇಸರಿಕೆಯನ್ನು ಹೋಗಲಾಡಿಸುತ್ತಿದ್ದ. ಅವಳ ಸಂಗಡ ಹೋಗಿ ಗೃಹಕೃತ್ಯಕ್ಕೆ ಬೇಕಾದ ಗಡ್ಡೆಗೆಣಸು ಕಟ್ಟಿಗೆಗಳನ್ನು ತರುತ್ತಿದ್ದ. ದಂಡಕಾರಣ್ಯದ ತಪಸ್ವಿಗಳ ಜೀವನವೇ ಶತ್ರುಘ್ನನ ನಿತ್ಯಸ್ಮರಣೆಯಾಗಿತ್ತು. ಘಳಿಗೆ ಘಳಿಗೆಗಳು ಪ್ರತಿಕ್ಷಣದಲ್ಲೂ ರಾಮಾಗಮನ ಸಮಯವು ಸಮೀಪಿಸುತ್ತಿರುವುದರ ಭಾಸವೇ ಆಗುತ್ತಿರಲಿಲ್ಲ. ದಿನೇದಿನೇ ದೂರವಾಗುವುದರ ಅನುಭವವಾಗುತ್ತಿತ್ತು. ಮಂತ್ರಾಲೋಚನೆ, ಆಡಳಿತ ಸಮೀಕ್ಷೆ ಮತ್ತು ಶ್ರೀರಾಮನ ಪಾದುಕೆಗಳಿಗೆ ವರದಿ ಒಪ್ಪಿಸುವುದು ನಿತ್ಯಕರ್ಮವಾಗಿತ್ತು. ಗಡಿರಕ್ಷಣೆಗೆ ವಿಶೇ

ಷವಾಗಿ ಗಮನಕೊಟ್ಟಿದ್ದ. ಎಷ್ಟು ವನವಾಸಾವಧಿಗಳು ಕಳೆದುವು ಎಂಬು ದನ್ನು ಪುರೋಹಿತರು ಹೇಳಿದರೂ ನಂಬಿಗೆ ಇಲ್ಲ. ಊರ್ಮಿಳಾದೇವಿ ಹೇಳಿ ದರೂ ಭರವಸೆ ಇಲ್ಲ.

ಶ್ರೀರಾಮನ ವನವಾಸಾವಧಿಯಲ್ಲಿ ಹತ್ತು ಹನ್ನೊಂದು ವರ್ಷಗಳು ಕಳೆದುವು. ಶತ್ರುಘ್ನನಿಗೆ ಕಾತರ ಕಳವಳ ವನವಾಸಗಳ ಬಗೆಗೆ ಹಿರಿದಾಗುತ್ತ ಬಂದಿತು. ಭರತನು ನಿರಾಶೆಯೇ ಮೂರ್ತಿವೆತ್ತಂತಿದ್ದ. ಭರತನ ಚಿತ್ತಸ್ವಸ್ಥ ತೆಗೆ ಏನಾದರೊಂದು ಉಪಾಯ ಹುಡಕಬೇಕೆಂದು ಆಲೋಚಿಸಿ ಸ್ವಲ್ಪ ಬಿಡು ವಾಗಿದ್ದಾಗ ಅಣ್ಣನ ಬಳಿ ಬಂದ. ಏನೋ ರಹಸ್ಯವಿರಬೇಕೆಂದು ಏಕಾಂತಕ್ಕೆ ಭರತ ಹೋದ. ಆದರೆ ಅಣ್ಣ ಎಲ್ಲಿ ತಪ್ಪು ಅರ್ಥಮಾಡಿಕೊಂಡಾನೆಂಬ ಭಯ. "ಅಣ್ಣ, ನಿನಗೊಂದು ಸೊಗಸಾದ ಪ್ರಲೋಭವನ್ನೊಡ್ಡಬೇಕೆಂದಿದ್ದೇನೆ. ಆದ್ದರಿಂದ ಎಚ್ಚರದಿಂದ ಆಕರ್ಣಿಸಬೇಕು" "ಆಗಲಿ" "ಅಣ್ಣ, ಚಿತ್ರಕೂಟ ದಲ್ಲಿ ನೀನು ನಡೆದುಕೊಂಡ ರೀತಿ ತ್ರಿಲೋಕವನ್ನೂ ಮೆಚ್ಚಿಸುವಂಥದ್ದು. ಆದರೆ ಒಂದು ವಿಚಾರದಲ್ಲಿ ದುಡುಕಿದೆ ಎಂದೆನಿಸುತ್ತದೆ" "ಯಾವುದು" "ಏನಿಲ್ಲ, ಶ್ರೀರಾಮನು ವನವಾಸಾವಧಿಯ ಮಾರನೆದಿನ ಬಾರದಿದ್ದರೆ ಅಗ್ನಿ ಪ್ರವೇಶ ಮಾಡುತ್ತೇನೆಂದು ಹೇಳಿದ್ದು. ಕೈಕ್ತಾಯಿಯವರು ವನವಾಸಿಗಳಿಗೆ ಇತ್ತ ಆದೇಶ ಶ್ರೀರಾಮನು ಬದುಕಿ ಬರಲಾರನೆಂಬ ಅರಿವಿನಿಂದ. ಹೀಗಿರು ವಾಗ ಅವಳ ನಿರೀಕ್ಷೆಯಂತೆ ನಡೆದುಹೋದರೆ, ಶ್ರೀರಾಮನು ನಿನ್ನ ಪ್ರಾಣಕ್ಕೆ ಹೊಣೆಯೆ ? ನಿನ್ನ ಶೀಲಸಂಪತ್ತು, ನಿನ್ನ ನಿರ್ಧಾರ, ನಿನ್ನ ಈ ಪ್ರತಿಜ್ಞೆಗಳು ಹೀಗಿರುತ್ತವೆ ಎಂದು ತಿಳಿದಿದ್ದರೆ ಖಂಡಿತವಾಗಿಯೂ ಅವಳು ವರಗಳನ್ನೇ ಬೇಡುತ್ತಿರಲಿಲ್ಲ. ಕೇಳಿದ್ದರೂ ಅಪ್ಪನ ಪ್ರಾರ್ಥನೆ ಮತ್ತು ವಸಿಷ್ಠಾದಿಗಳ ಹಿತೋಪದೇಶಕ್ಕೆ ಗೌರವಕೊಟ್ಟು ಅಷ್ಟು ಒತ್ತಾಯ ಮಾಡುತ್ತಿರಲಿಲ್ಲ. ಈಗ ಅಂಥ ಸಂದರ್ಭ ಬಂದರೆ ನೀನು ಅಗ್ನಿಪ್ರವೇಶ ಮಾಡಿದರೆ ನಾನೊಬ್ಬ ಬದುಕ ಬಹುದೆ ? ಒಂದುವೇಳೆ ಸ್ವಲ್ಪ ತಡವಾಗಿ ಶ್ರೀರಾಮನು ಬಂದದ್ದೇ ಆದರೆ ಅವನು ಬದುಕ ಬಲ್ಲನೆ ? ಲಕ್ಷ್ಮಣನಾದರೂ ಅಷ್ಟೆಯೇ. ನಿನ್ನ ವಿಚಾರಕ್ಷೇತ್ರ ವನ್ನು ವಿಸ್ತರಿಸಿದರೆ ಇಕ್ಷ್ವಾಕು ವಂಶದ ಅಂತ್ಯದೃಶ್ಯವು ಕಾಣಿಸುತ್ತಿದೆ ಯಲ್ಲವೆ?" "ಏನು ಹೇಳಿದೆ ತಮ್ಮ, ನಾನು ಪ್ರತಿಜ್ಞೆಯನ್ನು ಭಂಗಪಡಿಸ

ಕೊಳ್ಳಬಹುದೆ ? ಶ್ರೀರಾಮನು ಸಕಾಲದಲ್ಲಿ ಬರುವೆನೆಂದು ಎಲ್ಲರೆದುರಿಗೂ ಹೇಳಿದ್ದಾನಲ್ಲ. ಅವನೂ ವಚನಭ್ರಷ್ಟನಾಗುವನೆ ? "ಲೋಕಾಭಿರಾಮ ವಾಗಿ, ಅಮ್ಮನ ಮದುವೆ ಸಂದರ್ಭದಲ್ಲಿ ಅಪ್ಪನು ಹೇಳಿದಹಾಗೆ, ಹೇಳಿದ, ಅಷ್ಟೆ" ; "ಅಷ್ಟೇನಾ" ಎಂದು ಅಳಲಾರಂಭಿಸಿದ. ಶತ್ರುಘ್ನನಿಗೆ ಭಯ ವಾಯಿತು. "ಅಣ್ಣ ಅಣ್ಣ, ಏನಿದು, ಇಷ್ಟು ಅಧೈರ್ಯವು ನಿನಗೆಲ್ಲಿಂದ ಬಂದಿತು. ನಿನ್ನನ್ನು ಉಲ್ಲಾಸಗೊಳಿಸಲು ನಾನು ಹೀಗೆ ಹೇಳಿದೆ. ಇನ್ನು ಪ್ರಲೋಭನದ ವಿಷಯವನ್ನೆತ್ತಿದರೆ ಏನಾಗಿಬಿಡುವೆಯೊ ಎಂಬ ಭಯ" ಎಂದನು. ಭರತನು ಚೇತರಿಸಿಕೊಂಡ. "ಸಮಸ್ಯೆಯನ್ನು ಸೃಷ್ಟಿಸಿದವನೇ ಅದರ ಪರಿಹಾರವನ್ನೂ ಕಂಡುಕೊಳ್ಳಬೇಕಲ್ಲವೆ ?" "ಅದು ಸುಲಭವಾದ ಪರಿಹಾರ. ಶ್ರೀರಾಮನು ಖಂಡಿತವಾಗಿ ವಚನಭ್ರಷ್ಟನಾಗುವುದಿಲ್ಲ. ಅವನು ವಿಶ್ವಾಮಿತ್ರರ ಯಜ್ಞರಕ್ಷಣೆಗೆ ಹೋದಾಗ ತಾಟಕಿ ಸುಬಾಹುಗಳನ್ನು ಕೊಂದು ವಾಯವ್ಯಾಸ್ತ್ರದ ಪರೀಕ್ಷಾರ್ಥವಾಗಿ ಅದನ್ನು ಪ್ರಯೋಗಮಾಡಿ ಮಾರೀಚ ನನ್ನು ಸಹಸ್ರಯೋಜನದಾಚೆಯಿರುವ ಸಮುದ್ರದ ದಂಡೆ ಮೇಲೆ ಬೀಳಿಸ ಲಿಲ್ಲವೆ ? ಸಮಯ ಮಿಂಚಿಹೋಗುವ ಸಂದರ್ಭ ಬಂದರೆ ಮಾರನೆ ದಿನದ ಮುಂಜಾನೆ ವೇಳೆಗೆ ಆದೇಶವನ್ನು ಹೊತ್ತ ಶರಪತ್ರವು ನಮಗೆ ಸೇರುವು ದಿಲ್ಲವೆ ? ಒಂದೆರಡು ದಿನಗಳ ಅಥವಾ ಮಾಸಗಳ ಬೇಡಿಕೆಯಿರಬಹುದು. ಅಣ್ಣನಾಣತಿಯನ್ನು ನೀನು ಪಾಲಿಸಬೇಕೊ ಅಥವಾ ದುಡುಕಿ ಮಾಡಿದ ಪ್ರತಿಜ್ಞೆಯನ್ನು ಪಾಲಿಸಬೇಕೊ ?" ಎಂದ. ಭರತನಿಗೆ ಹರ್ಷೋತ್ಕರ್ಷ ವಾಯಿತು, ಶತ್ರುಘ್ನನಿಗೆ ಸ್ವಲ್ಪ ಧೈರ್ಯ ಬಂತು. ಭರತ ಮತ್ತಷ್ಟು ಕಾತರನಾದ. "ವತ್ಸ, ನಿನ್ನ ಈ ವಿವರಣೆಯಲ್ಲಿ ಸ್ವಲ್ಪ ಬಾಲಂಗಚ್ಚಿ ಉಳಿದು ಕೊಂಡಂತಿದೆ. ಅದನ್ನೂ ಹೇಳಿಬಿಡು" ಎಂದ ಭರತ. "ಏನೂ ಇಲ್ಲ ಅಣ್ಣ, ಆ ಶರಪತ್ರದಲ್ಲಿ 'ನಾನು ರಾಕ್ಷಸರ ಮಧ್ಯೆ ಸುತ್ತುವರಿಯಲ್ಪಟ್ಟಿದ್ದೇನೆ. ಅಯೋಧ್ಯಾಭಿಮುಖವಾಗಿ ಕ್ರಮಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಚಿತ್ರ ಕೂಟಕ್ಕೆ ತಂದಿದ್ದ ಸೈನ್ಯದ ಜತೆಗೆ ಬೇಡರೊಡೆಯನ ಪಡೆ ಸಹಿತ ಶೀಘ್ರವಾಗಿ ಬರುವುದೆಂದು' ಕೋರಿದ್ದರೆ ಏನು ಮಾಡುತ್ತಿದ್ದೆಯಣ್ಣ ? ಅಣ್ಣನ ಪ್ರಾಣ ರಕ್ಷಿಸುತ್ತಿದ್ದೆಯೊ ; ಪ್ರತಿಜ್ಞೆಯನ್ನು ಪೂರೈಸುತ್ತಿದ್ದೆಯೊ ?" "ನೀನು

ಸೈನ್ಯವನ್ನು ವಾಯುವೇಗದಲ್ಲಿ ಸ್ಥಳಾಂತರಗೊಳಿಸುತ್ತಿದ್ದೆ ಎಂಬುದರಲ್ಲಿ ಭರವಸೆ ಇಟ್ಟು ಧಾವಿಸುತ್ತಿದ್ದೆ. ಪ್ರತಿಜ್ಞಾಭಂಗಕ್ಕೆ ಪ್ರಾಯಶ್ಚಿತ್ತವುಂಟಲ್ಲವೆ ?'' ''ಹೌದು'' ''ಆದರೆ ಮತ್ತೊಂದು ವಿಷಯವನ್ನು ಮರೆತು ಬಿಟ್ಟೆ. ಇಂದ್ರನು ವಿಶ್ವಾಮಿತ್ರನಿಗೆ 'ಶ್ರೀರಾಮನಿಂದ ಒಂದು ದೇವಕಾರ್ಯ ವಾಗಬೇಕಾಗಿದೆ' ಎಂದು ಹೇಳಿದ್ದದ್ದನ್ನು ನಾವು ಕೇಳಿ ಬಲ್ಲೆವಲ್ಲವೆ ?'' ''ಹೌದು'' ''ಈಗ ನಾವೂ ದೇವಕಾರ್ಯದಲ್ಲಿ ಭಾಗಿಯಾಗುವ ಸುಸಮಯ ಒದಗಿಬರಬಹುದಲ್ಲವೆ'' ? ''ಅಹುದು, ಅಹುದು'' ಎಂದು ಭರತನು ಹರ್ಷೋನ್ಮತ್ತನಾಗಿ ಶತ್ರುಘ್ನನನ್ನು ಮುಂಡಾಡಿದನು.

''ವತ್ಸ, ಎಲ್ಲಿ ನೀನು ಹೇಳಿದ ಪ್ರಲೋಭನವಾವುದು. ಅದನ್ನು ಕೇಳಬೇಕೆಂದು ಕಾತರನಾಗಿದ್ದೇನೆ. ಹೇಳು ಹೇಳು'' ಎಂದ ಭರತ. ''ಅದನ್ನು ಹೇಳಿದರೆ ಎಲ್ಲಿ ಮುಡುಕಿ ಬಿಡುವೆಯೊ ಎಂಬ ಭಯ'' ''ಇಲ್ಲ, ಇಲ್ಲ. ಸಂಕೋಚವಿಲ್ಲದೆ ಅದನ್ನೊಡ್ಡು'', ''ಚಿತ್ರಕೂಟದಲ್ಲಿ ಶ್ರೀರಾಮನೇನೆಂದ. ರಾಜನಾಗುವುದು ಭರತ ಲಕ್ಷ್ಮಣ ಶತ್ರುಘ್ನರಿಗೋಸ್ಕರವೇ ಎಂದು ಹೇಳಿದ್ದನಲ್ಲವೆ ?'' ''ಅಹುದು'' ''ಶ್ರೀರಾಮ ಲಕ್ಷ್ಮಣರ ಶೌರ್ಯ ಪರಾಕ್ರಮಗಳೇನೆಂಬುದು ನಮಗೆ ಗೊತ್ತಿದೆ. ಅದಲ್ಲದೆ ಅವನಿಗೆ ಮಹತ್ತಾದ ದೈವ ಸಹಾಯವಿದೆ. ಆದ್ದರಿಂದ ದೇವಕಾರ್ಯವನ್ನು ಮುಗಿಸಿ ಕೋಸಲ ದೇಶದಿಂದ ಕಳಚಿ ಹೋಗಿರುವ ರಾಜ್ಯಗಳನ್ನು ಅವನು ಗೆದ್ದು ಸ್ವಾಧೀನಪಡಿಸಿಕೊಳ್ಳಬಲ್ಲನಲ್ಲವೆ ? ಮತ್ತು ಇತರ ರಾಜ್ಯಗಳನ್ನೂ ಧರ್ಮೋದ್ಧಾರಕ್ಕಾಗಿ ಗೆದ್ದು ಚಕ್ರವರ್ತಿಯಾಗಬಲ್ಲ ನಮ್ಮ ಪೂರ್ವಿಕರ ಹಾಗೆ. ಅದಕ್ಕೆ ನಮ್ಮ ಸಹಾಯವೂ ಇದ್ದಲ್ಲಿ ಇಡೀ ಭೂಮಂಡಲವೇ ನಮ್ಮದಾಗಬಲ್ಲುದು'' ''ಹಾಗಾದರೆ ವನವಾಸಾನಂತರ ಚಕ್ರವರ್ತಿಯಾಗಲಿ. ಈಗ ನೀನೇಕೆ ಪಟ್ಟಾಭಿಷಿಕ್ತನಾಗಬಾರದು ? ದೈವವೇ ಇದನ್ನು ಕರುಣಿಸಿದಂತಿದೆ. ಮಾತೆಯ ಮಾತನ್ನು ಮೀರುವಂತಿಲ್ಲ. ಮಾತೆಯೇ ಪ್ರತ್ಯಕ್ಷ ದೇವತೆಯೆಂದು ನಾವು ಭಾವಿಸಿದ್ದೇವೆ. ಅದಕ್ಕೆ ಮನ್ನಣೆಯನ್ನು ಏಕೆ ಕೊಡಬಾರದು ? ರಾಜನಿಲ್ಲದ ರಾಜ್ಯ ಹಲವು ತೆರನ ಪ್ರಕ್ಷುಬ್ಧತೆಗೊಳಗಾಗಿ ಲೋಕಕ್ಷಯ, ಧರ್ಮಕ್ಷಯ, ವರ್ಣಸಂಕರ ಇತ್ಯಾದಿಗಳು ಜರುಗುತ್ತವೆ. ಈಗ ನೀನು, ಪ್ರಜೆಗಳು ಎಲ್ಲಿ

ಶ್ರೀರಾಮನಿಗೆ ನಮ್ಮ ಆಡಳಿತದ ಬಗೆಗೆ ದೂರು ಹೇಳುತ್ತಾರೊ ಎಂಬ ಭಯದಿಂದ ಪ್ರಜೆಗಳಿಗೆ ಮಿತಿಮೀರಿದ ದಯೆಯನ್ನು ತೋರಿಸುತ್ತಿದ್ದೀಯೆ, ಬೇಹುಗಾರರಿಂದ ನಾನು ತಿಳಿದಂತೆ, ನೋಡಿದಂತೆ ನೀನು ಪುರ ಪರೀಕ್ಷೆಗೆ ಹೊರಟರೆ ಪೊರಸಾಲೆಯಲ್ಲಿ ಮಲಗಿರುವ ಜನರು ಎದ್ದು ನಿನಗೆ ಮರ್ಯಾದೆ ಯನ್ನೇ ತೋರಿಸುವುದಿಲ್ಲ, ನಮ್ಮ ಭಟರು ಅವರನ್ನೆಬ್ಬಿಸಬೇಕು. ಕೆಲವು ರೈತರು ಹೀಗೆ ಮಾತಾಡಿಕೊಂಡರಂತೆ. ' ಹಗಲೆಲ್ಲಾ ದುಡಿದು ನಿದ್ದೆಯಮ್ಮನ ಪೂಜೆಗೈಯ್ಯುವಾಗ ಮಹಾರಾಜರು ಬಂದರೆಂದು ಭಟರು ಕ್ರೂರವಾಗಿ ಎಬ್ಬಿಸುತ್ತಾರೆ. ಭೃತ್ಯರ ಒರಟುತನವನ್ನು ಸಹಿಸುವುದಕ್ಕಾಗುವುದಿಲ್ಲ. ಪ್ರತೀಕಾರ ಮಾಡೋಣವೆನ್ನಿಸುತ್ತದೆ. ಅದು ಬೇಡ. ಗಂಟೆಮಾರುವ ವರ್ತಕ ರಿದ್ದಾರೆ, ಒಂದು ಒಳ್ಳೆಯ ದೊಡ್ಡ ಗಂಟೆಯನ್ನು ಮಹಾರಾಜರು ನಡುವಿಗೆ ಕಟ್ಟಿಕೊಂಡು ಪುರಪ್ರದಕ್ಷಿಣೆ ಬಂದರಾಯಿತು '. ಕೇಳಿದೆಯಣ್ಣಾ ? ಹೆಚ್ಚಿದ ಒಕ್ಕಲಿಗ ಉಚ್ಚಿದ ಎಮ್ಮೆ ಬದುಕಲಾರವು. ಭರತನ ದಯಾಮಯ ದೇಹದ ನಡುವಿಗೆ ಗಂಟೆ ಕಟ್ಟಿಸಿದರು ಕೊಬ್ಬಿದ ರೈತರೆಂಬ ಗಾದೆಯೇ ಸೃಷ್ಟಿಯಾಗ ಬಹುದು. ಆದ್ದರಿಂದ ನೀನೇ ಪಟ್ಟಾಭಿಷಿಕ್ತನಾಗುವುದು ಯುಕ್ತವಲ್ಲವೆ ? ಶ್ರೀರಾಮನೂ ಅದಕ್ಕೆ ಸಂಮತಿಯನ್ನು ಈಗಾಗಲೆ ಕೊಟ್ಟಂತಿಲ್ಲವೆ " ಎಂದ ಶತ್ರುಘ್ನ. " ತಮ್ಮ, ಒಳ್ಳೆಯ ಪ್ರಲೋಭನವನ್ನು ಒಡ್ಡಿದೆ. ಆದರೆ ಅದಕ್ಕೆ ನಾನು ಬಲಿಯಾಗಬೇಕಾದರೆ ನೀನು ಯುವರಾಜನಾಗಲು ಒಪ್ಪಬೇಕು ". ಎಂದ ಭರತ. ಪರಸ್ಪರ ಆನಂದದಲ್ಲಿ ಮುಳುಗಿ ಅಪ್ಪಿಕೊಂಡು ಓಲಾಡಿದರು. ಮರೆಯಲ್ಲಿ ಹೊರಗೆ ನಿಂತಿದ್ದ ಮಾಂಡವಿ ಶ್ರುತಕೀರ್ತಿಯರ ಗಾಳಿ ಸೋಕಲೇ ಇಲ್ಲ ಸಹೋದರರಿಗೆ. " ಅಣ್ಣ, ನಾವು ಬಲ ಭ್ರಾತೃಗಳು. ಏಕೋದರ ಜನ್ಯರಲ್ಲ. ದುಷ್ಟರೂ, ಸ್ವಾರ್ಥಿಗಳೂ, ಮೇಲಾಗಿ ಶತ್ರುಗಳೂ ಇದ್ದಾರೆಂಬು ದನ್ನು ನಾವು ಅರಿತಿದ್ದರೂ ಅದಕ್ಕೆ ಎಳ್ಳಷ್ಟು ಜಾಗವನ್ನು ನಮ್ಮ ಹೃನ್ಮನದಲ್ಲಿ ಕೊಡಕೂಡದು. ಅದರ ಕಡೆ ಪ್ರಜ್ಞೆಯೇ ಇರಕೂಡದು ". " ಹಾಗೆಂದರೇನು ತಮ್ಮ, ನಮ್ಮ ತಾಯಂದಿರಲ್ಲಿ ಸವತಿ ಮಾತ್ಸರ್ಯವಿತ್ತೆಂದು ಲೋಕ ತಿಳಿದು ಕೊಂಡರೂ ತಿಳಿದುಕೊಳ್ಳಲಿ. ಆದರೆ ನಾವು ನಾಲ್ವರೂ ಸಹೋದರರೆಂದೇ ಜಗತ್ತು ತಿಳಿದುಕೊಳ್ಳುವಂತೆ ನಡೆಯುವುದೇ ನಮ್ಮ ಹೆಗ್ಗುರಿ, ವಂಶದ ಕೀರ್ತಿಯಲ್ಲವೆ " " ಅಣ್ಣ ರಾಮಾಗಮನವು ಸಮೀಪಿಸುತ್ತಿದೆ. ನನಗೇನೊ

ಅಂತರ್ಯದಲ್ಲಿ ಮಿಂಚುತ್ತಿದೆ ಸಕಾಲದಲ್ಲಿ ವನವಾಸಿಗಳ ದರ್ಶನವಾಗುವುದೆಂದು. ಏಕಾಂತ ಕೋಣೆಯಿಂದ ಹೊರಗೆ ಬಂದಾಗ ಮಾಂಡವಿ ಶ್ರುತಕೀರ್ತಿಯರು ಗಂಡಂದಿರ ದೃಷ್ಟಿಗೆ ಬೀಳುವಂತೆಯೇ ಮುಂದೆ ನಡೆದರು. ನಗೆ ಕಿಡಿಗಳು ಹಾರುತ್ತಿದ್ದುದನ್ನು ಇಬ್ಬರೂ ಗಮನಿಸಿ ಹರ್ಷಿತರಾದರು,

"ಅಣ್ಣ, ದಿನಗಳೆದಂತೆ ಈಗ ಹತ್ತು ಹನ್ನೆರಡು ವರ್ಷಗಳ ಕೆಳಗೆ ಅರಮನೆಯಲ್ಲಿ ಅಂತಃಪುರ ಸ್ತ್ರೀಯರ ಮನರಂಜನೆಗೋಸ್ಕರ ನಾನು ಏರ್ಪಡಿಸಿದ್ದ ನಾಟಕಾಭಿನಯದ ದೃಶ್ಯ ನಿನಗೆ ಇನ್ನೂ ಮನೋಮಂದಿರದಲ್ಲಿದೆಯೆ ?" ಎಂದ ಶತ್ರುಘ್ನ. "ಅಹುದು, ಅದರಲ್ಲಿ ನಟಿಸಿದ ಪಟ್ಟಾಭಿಷೇಕ ದೃಶ್ಯವು ದಿನೇ ದಿನೇ ಪ್ರಖರವಾಗುತ್ತಿದೆ. ಅದು ಸಾಕ್ಷಾತ್ಕಾರವಾಗುವುದು ಎಂದೊ ಎಂದೊ ಎಂದು ನನ್ನ ಹೃದಯ ವಿಲಪಿಸುತ್ತಿದೆ" "ಹೌದು, ಹೌದು. ಆ ದೃಶ್ಯ ನನಗೊಂದು ಬಂಧನವಾಗಿ ಪರಿಣಮಿಸಿದೆ" "ಬೇಹುಗಾರರಿಂದ ಒಂದು ಸುದ್ದಿ ಬಂದಿತ್ತು. ಪುರೋದ್ಯಾನಗಳಲ್ಲಿ ತರುಣಿಯರು, ಕನ್ಯೆಯರು ವಿಹರಿಸಲು ತರುಣರ ಅಸಭ್ಯವರ್ತನೆಗಳಿಂದ ತೊಂದರೆಯಾಗುತ್ತಿದೆ ಎಂದು. ರಹಸ್ಯವಾಗಿ ವಿಚಾರಿಸಿ ಸತ್ಯಾಂಶವನ್ನು ತಿಳಿದುಕೊಂಡೆ. ಅವರನ್ನು ಸೂಕ್ತರೀತಿಯಲ್ಲಿ ದಂಡಿಸಿದೆ. ಅದು ಪರೋಕ್ಷವಾಗಿ ನಿನ್ನ ಗಮನಕ್ಕೆ ಬಂದಿರಬಹುದು". "ಅಹುದು, ಬಂದಿದೆ. ಆ ಹುಡುಗರ ಮಾತಾಪಿತೃಗಳು ನನ್ನಲ್ಲಿ ದೂರಿದರು, ಆಡಳಿತವನ್ನು ಸುಧಾರಿಸುವೆನೆಂದು ಅವರನ್ನು ಸಾಂತ್ವನಗೊಳಿಸಿ ಕಳಿಸಿದೆ. ಪ್ರಜೆಗಳನ್ನು ಎದುರುಹಾಕಿಕೊಳ್ಳುವುದು ಸುಲಭ. ಅವರ ಪ್ರೀತಿಯನ್ನು ಗಳಿಸುವುದು ಬಹು ಕಷ್ಟ. ಆದ್ದರಿಂದ ಕಥೆಯಲ್ಲಿ ಹೇಳಿರುವಂತೆ ಹಾವು ಕಚ್ಚಬಾರದು ಅದು ತೆಪ್ಪಗಿದ್ದರೆ ತುಳಿದು ಬಿಡುತ್ತಾರೆ, ಆದ್ದರಿಂದ ಬುಸ್ಸೆಂದರೆ ಹಿಂಸಕರು ದೂರವಿರುತ್ತಾರೆ. ಅಂತೆ ಹೆದರಿಸಿ ಬೆದರಿಸಿ ಯುವಕರನ್ನು ದಾರಿಗೆ ತರುವ ಉಪಾಯವನ್ನು ಪ್ರಯೋಗಿಸು. ಏಕೆಂದರೆ ಶ್ರೀರಾಮ ಬಂದಾಗ ನಮ್ಮ ಮೇಲೆ ದೂರು ಹೇಳುತ್ತಾರೆ. ಅಣ್ಣ ನೊಂದುಕೊಳ್ಳುತ್ತಾನೆ" ಎಂದ.

ಭಯೋತ್ಪಾದಕ ಸ್ವಪ್ನ

ಬಹಳ ಚಿಂತಾಮಗ್ನನಾಗಿ ಶತ್ರುಘ್ನನು ಭರತನ ಬಳಿಗೆ ಬಂದ.

"ಏನು ? ತಮ್ಮ ದುಗುಡದಿಂದ್ದೀಯೆ ?" "ಅಣ್ಣ, ನೀನು ಸ್ವಪ್ನಗಳನ್ನೂ ಕಾಣುವುದರಲ್ಲಿ ಪ್ರಭುವೆಂದು ತಿಳಿದುಕೊಂಡಿದ್ದೆ. ಆದರೆ ಈಗ ಆ ನಿನ್ನ ಪ್ರಭುತ್ವವನ್ನು ನನಗೆ ವಹಿಸಿದಂತಿದೆ" ನಸುನಗುತ್ತ "ಅಹುದು. ಈಗ ರಾಜ್ಯಾಡಳಿತದ ಕಾರ್ಯಗಳಿಂದ ಬಿಡುವಿಲ್ಲದಿರುವುದರಿಂದ ಅವುಗಳಿಗೆ ನನ್ನಲ್ಲಿ ಎಡೆ ಸಿಕ್ಕುತ್ತಿಲ್ಲ. ಆದ್ದರಿಂದ ಅವು ನಿನ್ನ ಮರೆ ಹೊಕ್ಕಿರಬೇಕು ? ಆ ಸ್ವಪ್ನವನ್ನು ವಿವರಿಸು" ಎಂದ. "ಅಣ್ಣ, ಏನು ಹೇಳಲಿ, ನನ್ನ ದೇಹ ಬಳಲಿಹೋಗಿ ಬೆವರುತ್ತಿದೆ. ಆಕಾಶದಿಂದ ಹತ್ತುಹೆಡೆಯ ಮಹಾ ಸರ್ಪ ಒಂದು ಧರೆಯತ್ತ ಬಂತು. ಅದಕ್ಕೆ ವಿಶಾಲವಾದ ರೆಕ್ಕೆಗಳಿದ್ದವು. ಅದರ ಬಾಲವು ನೀಳವಾಗಿತ್ತು. ಒಂದು ದೊಡ್ಡ ವಟವೃಕ್ಷವನ್ನು ಸುತ್ತಿಕೊಂಡು ಮೇಲಕ್ಕೆ ಹಾರಿತು. ಆ ಬಾಲದಲ್ಲಿ ಬಹು ಕಪ್ಪಾದ ನಾಗವೇಣಿಯೂ ನುಲಿದು ಕೊಂಡಂತಿತ್ತು. ಆ ದ್ವಾರೇಣ ಒಂದು ಸಣ್ಣ ಧ್ವನಿಯ ಆರ್ತನಾದ ನುಸಿದು ಬರುತ್ತಿತ್ತು. ಆ ವಿಜಾತೀಯ ಮೃಗ ದಕ್ಷಿಣದತ್ತ ಧಾವಿಸುತ್ತಿತ್ತು. ನಭದ ಮಧ್ಯ ಮಾರ್ಗದಲ್ಲಿ ಧರೆಯ ಮೇಲಿದ್ದ ಒಂದು ವಾನರ ಅದನ್ನು ವೀಕ್ಷಿಸಿದ. ಅವನು ಕೂಡಲೆ ಕಾಮರೂಪಿಯಾಗಿ ಗಗನದೆತ್ತರ ಬೆಳೆದು ಅಡ್ಡಹಾಕಲು ಹವಣಿಸಿದ. ಅಷ್ಟರಲ್ಲಿ ಆ ಮೃಗವು ದಕ್ಷಿಣ ಸಮುದ್ರವನ್ನು ದಾಟಿ ಭೂ ಮಧ್ಯದ ಬಂಡೆಯ ಮೇಲಿಳಿಯಿತು. ಇದು ವನವಾಸಿಗಳಿಗೆ ಮಹಾ ಕಷ್ಟ ಒದಗಿದೆ ಎಂದು ಸೂಚಿಸುತ್ತದೆ. ಅಲ್ಲವೆ". "ಹೌದು. ಪಾದುಕೆಗಳ ಮುಂದೆ ದಾಳಬಿಟ್ಟು ಪರಿಹಾರ ಮಾಡಿಕೊಳ್ಳೋಣ" "ಹಾಗೆಯೇ ಮಾಡೋಣ". ಭರತ ಶತ್ರುಘ್ನರು ಸರಯೂ ನದಿಯಲ್ಲಿ ಸ್ನಾನಮಾಡಿ ಸೂರ್ಯದೇವನಿಗೆ ಅರ್ಘ್ಯವನ್ನರ್ಪಿಸಿ, ಧ್ಯಾನಾಸಕ್ತರಾಗಿ ದಾಳಗಳನ್ನು ಬಿಟ್ಟು ಪ್ರಾರ್ಥಿಸಿದರು. ಅವುಗಳು ರವೆಯಷ್ಟು ಉರುಳಿ ಸ್ಥಿರವಾಗಿ ನಿಂತುಬಿಟ್ಟುವು, ಪ್ರಾಣಾಂತಕ ಕಷ್ಟಕ್ಕೆ ಸಿಕ್ಕಿದ್ದಾರೆಂದು ಸೂಚಿಸಿದುವು. ಸಹೋದರರು ಕಂಬನಿಗರೆಯುತ್ತ ಮೌನದಲ್ಲಿ ಮುಳುಗಿದರು. ಪತಿಗಳು ಮಹಾ ವ್ಯಸನ ಗ್ರಸ್ತರಾಗಿರುವುದನ್ನು ಪತ್ನಿಯರು ಕಂಡು ಬೆರಗಾಗಿ ವಿಹ್ವಲಗೊಂಡರು. ಅಷ್ಟರಲ್ಲಿ ಬಿಳಿಯಬಣ್ಣದ ಜೋಡಿ ಪಾರಿವಾಳಗಳು ಪಾದುಕೆಗಳ ಕೋಣೆ ಯೊಳಕ್ಕೆ ಹಾರಿಬಂದವು. ಗಂಡು ಹೆಣ್ಣಿನ ಸುತ್ತ ಗೂಗೂ ಗುಟ್ಟುತ್ತ ಪ್ರಣಯದ ಪ್ರದಕ್ಷಿಣೆ ಮಾಡುತ್ತಿತ್ತು. ಅದರರ್ಥವನ್ನು ಚಿಂತಿಸುತ್ತ ಮೌನ

ದಲ್ಲಿದ್ದರು. ಮತ್ತೆ ಆ ಶಾಂತಿಸೂಚಕ ಪಕ್ಷಿಗಳು ಹಾರಿಹೋದುವು. "ಸ್ವಪ್ನದ ಅರ್ಥವನ್ನು ಹೇಳುವುದರಲ್ಲಿ ನೀನು ಗಟ್ಟಿಗ. ಈ ಘಟನೆಗಳು ಏನನ್ನು ಸೂಚಿಸುತ್ತವೆ ? ಅಣ್ಣ" "ವತ್ಸ, ನಾನೇನು ಹೇಳಲಿ ? ರಾಕ್ಷಸರಿಂದ ಮೂವರಿಗೂ—ಅದರಲ್ಲೂ ಸೀತಾದೇವಿಗೆ—ಮಹಾ ಕಷ್ಟ ಒದಗಿರುವುದು ಖಂಡಿತ. ದಾಳಗಳ ಚಲನೆ ಅದನ್ನು ಸೂಚಿಸುತ್ತದೆ. ಈ ಶಾಂತಿದೂತ ಪಾರಿವಾಳಗಳು ಆ ಕಷ್ಟವು ಬಹು ಪ್ರಯಾಸದಿಂದ ಪರಿಹಾರವಾಗುತ್ತದೆ ಎಂದು ಸಾರುತ್ತವೆ. ಏನೂ ಹೆದರಿ ಚಿಂತಿಸಬೇಕಾದ್ದಿಲ್ಲ ; ನಗರದಲ್ಲಿ ಮತ್ತು ಮುಖ್ಯ ಪಟ್ಟಣಗಳಲ್ಲಿ ಹೋಮಾದಿ ಕಾರ್ಯಗಳೂ ಶ್ರೇಯಃ ಪ್ರಾರ್ಥನೆಗಳೂ ವನವಾಸಾವಧಿ ಮುಗಿಯುವ ಇನ್ನೆರಡು ವರ್ಷಗಳೂ ನಿರಂತರವಾಗಿ ನಡೆಯು ವಂತೆ ಏರ್ಪಾಡು ಮಾಡು. ಸಾಧುಸಂತರಿಗೆ ಸಂತರ್ಪಣೆಗಳೂ ತಪ್ಪದೆ ನಡೆಯಲಿ, ಅರಮನೆಯಲ್ಲಿರುವವರೆಲ್ಲಾ ಅನವರತ ರಾಮನಾಮ ಜಪ ಮಾಡಲಿ. ನಾವು ಮಧು, ಸಿಹಿಫಲವನ್ನು ತ್ಯಜಿಸೋಣ" ಎಂದ ಭರತ. "ತಥಾಸ್ತು" ಎಂದು ಪಾದುಕೆಗಳಿಗೆ ಪ್ರಣಾಮ ಮಾಡಿ ಗಂಭೀರ ಮುದ್ರೆ ಯನ್ನು ತಾಳಿದರು. ಸಕ್ರಿಯರಾದರು. ಶತ್ರುಘ್ನನು ವೀರಾವೇಶದಿಂದ ತನ್ನ ಕರ್ಮಗಳಲ್ಲಿ ನಿರತನಾದ. ತನ್ನ ಅಂತಃಪುರಕ್ಕೆ ಬಂದಾಗ ಸರಸಿಯಾದ ಶ್ರುತಕೀರ್ತಿ ಆ ಗಂಭೀರ ಮುದ್ರೆಗೆ ಕ[illegible]ಲಿ ಹಾಕಿ ತೆಗೆಸಿದಳು. ನಡೆದ ವೃತ್ತಾಂತವನ್ನೆಲ್ಲಾ ತಿಳಿದುಕೊಂಡಳು. ಊರ್ಮಿಳೆ, ಮಾಂಡವಿ ಮತ್ತು ತನಗೂ ದುಃಸ್ವಪ್ನಗಳಾದುವೆಂದು ಹೇಳಿ ತಾನೂ ವ್ರತನಿರತಳಾದಳು.

ನಾಳೆ ತ್ರಿಕಾಲ ಸಂಧಿಯ ತಿಥಿ

ಆಶ್ರಮದ ಪರಿಸರ ಶೋಭೆಗೊಂಡಿತು. ಮನೋಹರವಾದ ತಂಗಾಳಿ. ಸುತ್ತಮುತ್ತ ಸುಗಂಧದ ಪರಿಮಳ. ಅರುಣೋದಯವು ಅತಿಶಯವಾದ ಪೆಂಪನ್ನು ತಾಳಿತ್ತು. ಭರತ ಶತ್ರುಘ್ನರು ಸರಯೂ ಸ್ನಾನಮಾಡಿ ಬಂದು ಪಾದುಕೆಗಳ ಬಳಿ ಕುಳಿತರು. ಸತಿಯರು ಸಿದ್ಧಪಡಿಸಿದ್ದ ಪುಷ್ಪಾದಿ ಪೂಜಾ ಸಾಮಗ್ರಿಗಳನ್ನು ತೆಗೆದು ಅರ್ಚನೆ ಮಾಡುತ್ತಿದ್ದರು. ಪಾದುಕೆಗಳ ಪ್ರಖರ ವಾದ ಪ್ರಕಾಶವನ್ನು ಸೂಸುತ್ತಿದ್ದುವು. ಅನಾಸಕ್ತ ಯೋಗೀಂದ್ರನು ತೀರ್ಥ ಪ್ರಾಶನ ಮಾಡುತ್ತಿದ್ದಾಗ ಕಾಮರೂಪಿಯಾದ ಮಹಿಮಾತ್ಮನಾದ ಮನುಷ್ಯನು

ಪಾದುಕೆಗಳಿಗೆ ನಮಸ್ಕರಿಸಿ ಭರತ ಶತ್ರುಘ್ನರಿಗೆ ವಂದಿಸಿದ. ತಾನು ಶ್ರೀರಾಮ ದೂತನೆಂದು ಪರಿಚಯ ಮಾಡಿಕೊಟ್ಟ. ಶತ್ರುಘ್ನನಿಗೆ ನಿಗ್ರಹಿಸಲಾರದ ಆನಂದ. ಸ್ತಂಭೀಭೂತನಾಗಿ ರಾಮಾಯಣವನ್ನು ಕೇಳಿದ. ಭರದ್ವಾಜಾಶ್ರಮದಿಂದ ಸೀತಾಪತಿ ಲಕ್ಷ್ಮಣರು ಬರುವರೆಂದ. ಪದೇ ಪದೇ ಶ್ರೀರಾಮನ ಸಾಹಸಾದಿಗಳನ್ನು ಕೇಳುತ್ತಾ ಹನುಮಂತನನ್ನು ಆ ರಾತ್ರಿಯೆಲ್ಲಾ ಅಲ್ಲೇ ತಂಗುವಂತೆ ಮಾಡಿದರು.

ಮಾರನೆ ದಿನ ಬೆಳಿಗ್ಗೆ ವಿಮಾನದಿಂದ ಬಂದ ದಾಶರಥಿಗಳ ದರ್ಶನವಾಯಿತು. ಶತ್ರುಘ್ನನು ಅಣ್ಣನಾಣತಿಯಂತೆ ಶ್ರೀರಾಮನ ಸ್ವಾಗತಕ್ಕೆ ಸಕಲ ಏರ್ಪಾಡುಗಳನ್ನು ಮಾಡುವುದರಲ್ಲಿ ನಿರತನಾದ. ಪ್ರಪ್ರಥಮವಾಗಿ ತಾತ್ಕಾಲಿಕ ರಾಜಮಾತೆಯಾದ ಕೈಕಾದೇವಿಗೆ ಅವಳ ವಿಜಯಾಕಾಂಕ್ಷೆ ಫಲಿಸಿದ್ದನ್ನು ತಿಳಿಸಿದ. ಅವಳು ಅರಮನೆಯ ಸಕಲ ಸ್ತ್ರೀಯರೊಡಗೂಡಿ ಕೌಸಲ್ಯೆ ಸುಮಿತ್ರೆಯರ ಹಿಂದೆಯೇ ಹೋದಳು. ಭರದ್ವಾಜರ ವಾಕ್ಯಗಳು ಸತ್ಯವಾದುವು ಎಂದು ಗರ್ವಿತಳಾಗೇ ನಡೆದಳು. ಶ್ರೀರಾಮ ಸೀತೆ ಲಕ್ಷ್ಮಣರಿಗೆ ಶತ್ರುಘ್ನನು ವಂದಿಸಿದನು. ನಂದಿಗ್ರಾಮದಿಂದ ಅಯೋಧ್ಯೆಗೆ ಹೋಗುವ ದಾರಿ ಸುಗಮವಾಗಿತ್ತು. ಭರತ ತಾನೇ ರಥವನ್ನು ನಡೆಸಿದ. ಶತ್ರುಘ್ನ ಶ್ವೇತಛತ್ರವನ್ನು ಹಿಡಿದ. ಶ್ರೀರಾಮನ ಸಂಗಡ ಬಂದ ವಾನರ ರಾಕ್ಷಸಾದಿಗಳಿಗೆ ಅವರ ಸ್ಥಾನಮಾನಗಳಿಗೆ ತಕ್ಕಂತೆ ಷೋಡಶೋಪಚಾರಗಳು ನಡೆಯುವಂತೆ ವ್ಯವಸ್ಥೆ ಮಾಡಿದ್ದ. ದಾಶರಥಿಗಳ ಭ್ರಾತೃತ್ವವನ್ನು ಜನಕೋಟಿ ಕಣ್ಣಾರೆ ನೋಡಿ ಹರ್ಷಾಶ್ರುಗಳನ್ನು ಅಂತರ್ಯದಲ್ಲಿ ಶೋಕ ಬಿಂದುಗಳನ್ನೂ ಉದುರಿಸಿದರು. ಸರಳವೂ ಗಂಭೀರವೂ ಆದ ಪಟ್ಟಾಭಿಷೇಕ. ಶತ್ರುಘ್ನನ ಮೇಲ್ವಿಚಾರಣೆ. ಮೂವರು ಅಣ್ಣಂದಿರಿಗೂ ಕ್ಷೌರ ಸ್ನಾನಾದಿಗಳನ್ನು ಮಾಡಿಸಿ ತಾನೂ ಶುದ್ಧಿಗೊಂಡು ಶ್ರೀರಾಮನ ಪಟ್ಟಾಭಿಷೇಕವನ್ನು ನೆರವೇರಿಸಿದನು. ನೆರೆದಿದ್ದ ಅರಮನೆಯವರು ಹದಿಮೂರು ಹದಿನಾಲ್ಕು ವರ್ಷಗಳ ಹಿಂದೆ ನೋಡಿದ್ದ ನಾಟಕದ ಪಟ್ಟಾಭಿಷೇಕವು ಸುಸ್ಥಿರವಾಯಿತೆಂದು ಮಾತಾಡಿಕೊಳ್ಳುತ್ತಿದ್ದರು.

## ವಿಜಯ ಯಾತ್ರೆ

ರಾಮರಾಜ್ಯದಲ್ಲಿ ಪ್ರಜೆಗಳು ಸರ್ವಸುಖವನ್ನು ಅನುಭವಿಸುತ್ತಿದ್ದರು.

ಆದರೆ ಋಷಿ ತಪಸ್ವಿಗಳಿಗೆ ರಾಕ್ಷಸರ ಕಾಟ ತಪ್ಪಿರಲಿಲ್ಲ. ಆ ರಾಕ್ಷಸನೇ ಲವಣಾಸುರ. ತಮ್ಮಂದಿರಾದ ಮೂವರಲ್ಲಿ ಯಾರು ಆ ರಾಕ್ಷಸನನ್ನು ಸಂಹರಿಸುವಿರೆಂದ ಶ್ರೀರಾಮ. ಭರತ ತಾ ಮಾಡುವೆನೆಂದ. ಆಗ ಶತ್ರುಘ್ನ, ಅಣ್ಣ, ಭರತಣ್ಣನು ಮಹತ್ತಾದ ತಪಸ್ಸನ್ನಾಚರಿಸಿದ್ದಾನೆ. ಸುಖವೆಂಬುದನ್ನೇ ಕಾಣ. ಆದ್ದರಿಂದ ಎಲ್ಲರಿಗೂ ಕಿರಿಯವ ನಾನು ಆ ಕಾರ್ಯವನ್ನು ಮಾಡುವೆನು. ಅಜ್ಞೆಯೀಯಬೇಕೆಂದ. ತಥಾಸ್ತು ಎಂದ ಶ್ರೀರಾಮ. ಲವಣಾಸುರನ ನಗರವಾದ ಮಥುರಾ ಪಟ್ಟಣಕ್ಕೆ ಶತ್ರುಘ್ನನನ್ನು ಈಗಲೇ ರಾಜನನ್ನಾಗಿ ಮಾಡುವೆನೆಂದ. ಆಗ ಶತ್ರುಘ್ನ ಬಹು ವಿನಯದಿಂದ '' ನನಗೆ ಸಲ್ಲತಕ್ಕದಲ್ಲ. ಹಿರಿಯ ಅಣ್ಣಂದಿರಾದ ಭರತಲಕ್ಷ್ಮಣರಿಗೆ ಸಲ್ಲತಕ್ಕದ್ದು. ನಾನು ತಿಳಿಗೇಡಿಯಾಗಿ ಶೌರ್ಯ ಮದೋನ್ಮತ್ತನಾಗಿ ಮುಂದೆ ಬಂದದ್ದು ತಪ್ಪಾಯಿತು. ಧರ್ಮ ಪ್ರಭು ನೀನಾಗಿರುವುದರಿಂದ ನಿನ್ನ ಆದೇಶವೇ ಸರ್ವ ಧರ್ಮಾತ್ಮಕವಾದದ್ದೆ''ಂದು ಅಡ್ಡಬಿದ್ದ. '' ವತ್ಸ, ಯೋಚಿಸಬೇಡ. ಲವಣಾಸುರ ವರಗರ್ವಿತ. ಅವನು ತನ್ನ ಅಸ್ತ್ರವನ್ನು ಹಿಡಿಯದೆ ಪುರ ಹೊರವಳಯದಲ್ಲಿದ್ದಾಗ ಅವನನ್ನು ಕೊಲ್ಲುವುದು ಸಾಧ್ಯ. ಹಾಗೆ ಮಾಡೆಂದು '' ಪಟ್ಟಗಟ್ಟಿ ಹರಸಿದ. ಮಥುರಾಕ್ಕೆ [ಪ್ರಾಯಶಃ ಈಗಿನ, ಶ್ರೀಕೃಷ್ಣನ, ಮಥುರಾ[illegible]ರಬಹುದು] ದಾಳಿಯಿಡುವಾಗ ವಾಲ್ಮೀಕಿ ಆಶ್ರಮದಲ್ಲಿ ತಂಗಿದ್ದು ಕುಶಲವರ [illegible]ಜನನ ವಾರ್ತೆಯನ್ನು ತಿಳಿದು ಲವಣಾಸುರನನ್ನು ಕೊಂದ. ಕೆಲವು ವರ್ಷ[illegible]ಗಳಕಾಲ ಅಲ್ಲೇ ಇದ್ದು ರಾಜ್ಯಾಡಳಿತವನ್ನು ಸುವ್ಯವಸ್ಥೆಗೊಳಿಸಿ ಶ್ರೀರಾಮನನ್ನು ನೋಡಲು ಅಯೋಧ್ಯೆಗೆ ಬಂದನು. ಅಣ್ಣನ ದರ್ಶನವಾಯಿತು. ಅವನ ಸಮೀಪದಲ್ಲೇ ಇರುವುದನ್ನು ಅಪೇಕ್ಷಿಸಿದ. ಶ್ರೀರಾಮನು ಅದು ಕ್ಷತ್ರಿಯ ಯೋಗ್ಯವಾದುದಲ್ಲವೆಂದು ಹೇಳಿ ಏಳು ರಾತ್ರಿಗಳು ಮಾತ್ರ ಇದ್ದು ಹೋಗೆಂದ. ಅದರಂತೆ ಇದ್ದು ಅಣ್ಣಂದಿರ ಆಶೀರ್ವಾದಗಳನ್ನು ಹೊತ್ತು ಮಧುಪುರಿಗೆ ಹೋಗಿ ಮಹಾಪ್ರಸ್ಥಾನದ ಪರ್ಯಂತ ರಾಜ್ಯವಾಳಿದನು.

ಶ್ರೀರಾಮನ ಪಟ್ಟಾಭಿಷೇಕವಾದ ತರುಣದಲ್ಲೆ ಅರಮನೆಯ ಸಂಸಾರದಲ್ಲಿ ಒಂದು ಪ್ರಸಂಗ ನಡೆಯಿತು. ನಾಲ್ವರು ಅಣ್ಣತಮ್ಮಂದಿರು ಒಳಗೂ ಹೊರಗೂ ಶಾಂತಿ ನೆಲೆಸಿರುವುದನ್ನು ನೆನೆಸಿಕೊಳ್ಳುತ್ತಿದ್ದರು. ಶ್ರೀರಾಮನೆಂದ

" ಭರತನಿಗೇನೋ ಯುವರಾಜ ಪಟ್ಟವಾಯಿತು. ಕೈಕಾತಾಯಿಯವರ ಅಭೀಷ್ಟ ಸಿದ್ಧಿಸಿತು. ಊರ್ಮಿಳೇಶನಿಗೆ ' ರಾಮಾನುಜ 'ನೆಂಬ ಪಟ್ಟಾಭಿಷೇಕ ವಾಯಿತು, ಪಾಪ, ಶತ್ರುಘ್ನನಿಗೇ ಏನೂ ಇಲ್ಲವಲ್ಲ!! ಸುಮಿತ್ರಾಮಾತೆ ನೊಂದುಕೊಳ್ಳುವುದಿಲ್ಲವೆ ? " ಎಂದ. ಲವಣಾಸುರನ ಆಕ್ರಮಣಕಾರಿ ವರ್ತನೆ ಗಳ ಬಗೆಗೆ ಸುದ್ದಿ ಬರುತ್ತಿದೆಯಣ್ಣ ಎಂದ ಭರತ. ಕಾಲ ಪಕ್ವವಾಗಲೆಂದ ರಘುವೀರ.

ದಾಶರಥಿಗಳ ಗೋಷ್ಠಿ ನಡೆದ ಸ್ವಲ್ಪದಿನಗಳಲ್ಲಿ ಮೂವರು ರಾಣಿ ಯರು ನಾಲ್ವರು ಸೊಸೆಯಂದಿರು ಅರಮನೆಯ ಮಾಳಿಗೆಯ ಮೇಲೆ ಪಂಚಮಿಯ ಶಶಿ ಉದಯವಾದನಂತರ ಕುಳಿತು ಹರಟೆ ಹೊಡೆಯುತ್ತಿದ್ದರು. ಸರಸಸಲ್ಲಾಪದ ಆನಂದ ಚಂದ್ರಿಕೆಯ ಆಹ್ಲಾದದೊಡನೆ ಸ್ಪರ್ಧೆ ಹೂಡಿತ್ತು. ಸುಮಿತ್ರಾ, ತಂಗಿಯ ಮಕ್ಕಳಿಗೆ ಯಾವ ಪ್ರಭುತ್ವ ಅಥವಾ ಬಿರುದುಗಳೇ ಸಿಕ್ಕಲಿಲ್ಲವಲ್ಲವೆಂದು ಕೌಸಲ್ಯೆ ಗಂಭೀರವಾಗಿ ನುಡಿದರು. " ಏನಕ್ಕ ಹೀಗೆ ಹೇಳುತ್ತೀರಿ ? ನಿನ್ನ ಮಗನ ಜತೆಯಲ್ಲೇ ಊರ್ಮಿಳೇಶನು ಚಿರಂಜೀವಿ ಯಾಗಿ ' ರಾಮಾನುಜ 'ನೆಂಬ ಬಿರುದನ್ನು ಗಳಿಸಿರುವುದು ಸಾಮಾನ್ಯವೆ ? " ಎಂದಳು ಸುಮಿತ್ರೆ. " ನನ್ನ ಮಗನಿಗೆ, ಲಕ್ಷ್ಮಣ ಬೇಡವೆಂದ ಮೇಲೆ, ನನ್ನ ಆನಂದವು ವರ್ಧಿಸುವಂತೆ ಯುವರಾಜ ಪದವಿಯನ್ನು ಕೌಸಲ್ಯಾಸುತ ಕರುಣಿ ಸಿದ್ದು ಮಹತ್ವಪೂರ್ಣವಾದ್ದದ್ದಲ್ಲವಕ್ಕ ". " ಹೌದು " " ಆದರೆ ನಿನ್ನ ಪ್ರೀತಿಯ ಕಿರಿಯ ಮಗನಿಗೆ ಶೂನ್ಯ ಪಟ್ಟವಾಯಿತಲ್ಲ ಎಂದು ನಮ್ಮೆಲ್ಲರಿಗೂ ಕೊರಗು " ಎಂದಳು ಭರತನ ಮಾತೆ. " ಹಾಗೆನ್ನುವಿರಾ ? ಸತಿಪತಿಯ ಅರ್ಧಾಂಗಿಯಲ್ಲವೆ ? ' ಶ್ರುತಕೀರ್ತಿ ಎಂದರೆ ಏನರ್ಥ ? ಪ್ರಸಿದ್ಧಳಾದವಳು ; ಯಶಸ್ಸನ್ನು ಪಡೆದವಳೆಂದಲ್ಲವೆ ? ಅದು ಅನ್ವರ್ಥನಾಮವಲ್ಲವೆ ? ಶತ್ರುಘ್ನ ನಿಗೆ ಸ್ವಭಾವತಃ ಅನ್ವಯಿಸುವುದಿಲ್ಲವೆ ? " ಎಂದಳು ರಾಮಮಾತೆ. "ಅಂದರೆ ಶ್ರುತಕೀರ್ತಿಯ ವಲ್ಲಭನು ಮಹಾತ್ಮನೇ " ಎಂದಳು ಸುಮಿತ್ರೆ. ಮಾಂಡವಿ ಊರ್ಮಿಳೆಯರು ಅದು ನಿಜವೆಂದರು. " ಅಸೂಯೆಯ ವಚನಗಳಿವು " ನಗುನಗುತ್ತ ಹೇಳಿದಳು ಶ್ರುತಕೀರ್ತಿ. " ಸುಳ್ಳು ಸುಳ್ಳು ". ಶತ್ರುಘ್ನಾಗ್ರಜ ಸಾಕ್ಷಾತ್ ಕಂಡು ಕೇಳಿದ್ದನ್ನೇ ನನ್ನ ಸಂಗಡ ಹೇಳಿದ್ದಾನೆ " ಎಂದಳು ಊರ್ಮಿಳೆ. ಕೌಸಲ್ಯೆ ಕೈಕೇಯಿಯರು ಏಕಧ್ವನಿಯಿಂದ " ಎಲ್ಲಕ್ಕೂ ನೀನೇ,

ಸಾಕ್ಷಿ, ಸೀತೆ" ಹೇಳೆಂದರು. ಜಾನಕಿ "ದಾಶರಥಿಗಳೆಲ್ಲರೂ ಮಹಾತ್ಮರೇ" ಎಂದಳು. "ಹೌದು ಹೌದು, ಆದ್ಯಂತಕ್ಕೆಲ್ಲಾ ನೀನೇ ಸಾಕ್ಷಿ" ಎಂದರು. "ವಿಸ್ತರಿಸೆಂ"ದರು. ಓರಗಿತ್ತಿ ತಂಗಿಯರ ಕಟಾಕ್ಷವೂ ಮೈಥಿಲಿಯತ್ತ ಹರಿಯಿತು.

"ಶ್ರೀರಾಮನನ್ನು ಮಹಾತ್ಮನೆಂದು ಭರತನೇ ಹೇಳುತ್ತಾನೆ. (ಅಯೊ. ಸ. ೮೮ ಶ್ಲೋ. ೨, ೨೧, ಸ. ೯೨. ಶ್ಲೋ. ೮) ಅಗ್ನಿ ಪರೀಕ್ಷೆಯಾದಮೇಲೆ ದಶರಥ ಮಹಾರಾಜನೆ ದೇವತೆಗಳ ಸಂಗಡ ಬಂದು ಶ್ರೀರಾಮನನ್ನು ಮಹಾತ್ಮನ್ನೆನ್ನುತ್ತಾನೆ (ಯು. ಸ. ೧೨೨ ಶ್ಲೋ. ೧೬) ಭರತನನ್ನು ಚಿತ್ರ ಕೂಟದಲ್ಲಿ ಅಯೋಧ್ಯಾ ಪ್ರಜೆಗಳು "ಮಹಾತ್ಮ" ನೆಂದರು. (ಅಯೋ. ಸ. ೧೧೧ ಶ್ಲೋ. ೨೦) ಶ್ರೀರಾಮನೂ ಭರತನನ್ನು 'ಮಹಾತ್ಮ'ನೆಂದು ಸಂಬೋಧಿಸಿದ್ದಾನೆ (ಅಯೋ. ಸ. ೧೧೧ ಶ್ಲೋ. ೩೦) "ಕವಿಯೂ ಕೂಡ ಹಾಗೆನ್ನುತ್ತಾನೆ. (ಅಯೋ. ಸ. ೧೧೨ ಶ್ಲೋ. ೨೨) ಲಕ್ಷ್ಮಣನು ಪಂಚವಟಿ ಯಲ್ಲಿ ಭರತನನ್ನು ನೆನಸಿಕೊಂಡಾಗ "ಭರತನು ಮಹಾತ್ಮನೇ ಸರಿ" ಎನ್ನುತ್ತಾನೆ. (ಅರ. ಸ. ೧೬ ಶ್ಲೋ. ೩೫) ಲಕ್ಷ್ಮಣನೂ ಮಹಾತ್ಮನೇ. ಶ್ರೀರಾಮನು ಸುಮಂತ್ರನ ಸಂಗಡ ಹಾಗೆನ್ನುತ್ತಾನೆ. (ಅಯೋ. ಸ. ೫೨ ಶ್ಲೋ. ೩೧) ನಾನು ಅಗ್ನಿಯ ಕೃಪಾಕಟಾಕ್ಷಕ್ಕೊಳಗಾದಾಗ ಮಹಾರಾಜರು ದೇವತೆಗಳ ಸಮ್ಮುಖದಲ್ಲಿ "ಸೀತಾರಾಮರ ಸೇವೆಯಿಂದ ನಿನಗೆ ಪುಣ್ಯಫಲ ಜಗದ್ವಿಖ್ಯಾತವಾದ ಕೀರ್ತಿ, ಸ್ವರ್ಗ, ಗೌರವ ಎಲ್ಲವೂ ನಿನಗೆ ಕೂಡಿ ಬರುತ್ತವೆ" ಎಂದರು. (ಯು. ಸ. ೧೨೨ ಶ್ಲೋ. ೧೨೮) ವನವಾಸಕ್ಕೆ ಹೊರಡುವಾಗ ಕೌಸಲ್ಯಾದೇವಿಯರ ಮುಂದೆ ರಾಮನನ್ನು ರಕ್ಷಿಸುವೆನೆಂದು ಹೇಳಿದಾಗ (ಅಯೋ. ಸ. ೨೧ ಶ್ಲೋ. ೨೦) ಮತ್ತು ಸುಗ್ರೀವನನ್ನು ಎಚ್ಚರಿಸಿ ಬೆದರಿಸಿ ದಾಗ (ಕಿ. ಸ. ೩೩ ಶ್ಲೋ. ೧) ಕವಿಯು ಲಕ್ಷ್ಮಣನನ್ನು 'ಮಹಾತ್ಮ'ನೆಂದು ಉದ್ಗರಿಸಿದ್ದಾನೆ. ಶತ್ರುಘ್ನನನ್ನೂ "ಮಹಾತ್ಮ"ನೆಂದೇ ಘೋಷಿಸಿದ್ದಾರೆ, ಕುಬೇರ, ಯಮ, ದೇವೇಂದ್ರ, ವರುಣ, ಪರಮೇಶ್ವರ, ಬ್ರಹ್ಮ—ನನ್ನ ಅಗ್ನಿ ಪರೀಕ್ಷೆ ಕಾಲದಲ್ಲಿ ಬಂದು ದಶರಥ ಮಹಾರಾಜನ ಸಮಕ್ಷಮ "ಅಯೋಧ್ಯೆಗೆ ಹೋಗಿ ನಿನಗಾಗಿ ಕಾದಿರುವ ಮಹಾತ್ಮನಾದ ಶತ್ರುಘ್ನನನ್ನೂ ನಿನ್ನ ಎಲ್ಲಾ

ತಾಯಂದಿರನ್ನು ಸಂದರ್ಶಿಸು " ಎಂದು ಶ್ರೀರಾಮನಿಗೆ ಆಣತಿಯನ್ನಿತ್ತರು; ಇದು ಸಾಮಾನ್ಯವೇ ? (ಯು. ಸ. ೧೨೩ ಶ್ಲೋ. ೧೮) ಎಂದಳು. 'ಅಬ್ಬ' ಎಂದಳು ಕೈಕೇಯಿ. "ಎಲ್ಲಕ್ಕೂ ನಿಮಿತ್ತ ಕೈಕಾ ಮಹಾ ಅತ್ತೆಯವರೆ ಅಲ್ಲವೆ ? " ಎಂದಳು ಶ್ರುತಕೀರ್ತಿ. ಕೈಕೇಯಿ ಸುಮಿತ್ರೆಯನ್ನು ಬೆಂಟಿ ಹೇಳಿದಳು "ಪರಿಪಕ್ವವಾದ ಹೃದಯ ಇವಳದು. ಆತ್ಮ ಮಹತ್ತಾಗಿದೆ ಆದರೆ ಅಗೋಚರ" "ಸತ್ಯ, ಸತ್ಯ. ನೀವಿಬ್ಬರೂ ಆಡಿದ್ದು ಸತ್ಯ "ವೆಂದಳು, ಕೌಸಲ್ಯೆ.

# ಸೀತಾಸುತರ ಇತರ ಕೃತಿಗಳು

೧) ಸೀತಾ ದರ್ಶನ
೨) ಊರ್ಮಿಳಾ ದರ್ಶನ
೩) ಕಲಾಕಲಿಗಳ ಕರೆ
೪) ಭ್ರಷ್ಟಾಚಾರಕ್ಕೆ ಬಲಿ
೫) ಹಿರೋಷೀಮಾ (ಆಧುನಿಕ ಪುರಾಣ)
೬) ರಾಮಾಯಣದಲ್ಲಿ ಸ್ತ್ರೀ ಪಾತ್ರಗಳು ಒಂದು ಸಂಪುಟ
(ಬಿಡಿ ಬಿಡಿಯಾಗಿ)
೭) ಅಹಲ್ಯೆ
೮) ಕೌಸಲ್ಯೆ–ಸುಮಿತ್ರೆ
೯) ಕೈಕೇಯಿ–ಮಂಥರೆ
೧೦) ಸೀತೆ–ಸೀತಾಸಂಹಿತೆ
೧೧) ಊರ್ಮಿಳೆ–ಶ್ರುತಕೀರ್ತಿ
೧೨) ತಪಸ್ವಿನಿಯರು ಮತ್ತು ವಾನರ ಸ್ತ್ರೀಯರು
೧೩) ರಾಕ್ಷಸ ಸ್ತ್ರೀಯರು
೧೪) ರಾಮಾಯಣದಲ್ಲಿ ಪುರುಷಪಾತ್ರಗಳು (ಅಚ್ಚಿನಲ್ಲಿ)
೧೫) ಹನುಮಂತ ಮತ್ತು ಶರಣ ಶ್ರೀರಾಮ
೧೬) ಇಂದ್ರ ಮತ್ತು ದಶರಥ

ಮುದ್ರಣ: [illegible] ಮೊದಲನೇ ಮುಖ್ಯ ರಸ್ತೆ, ಮೈಸೂರು-೨